| Sl. No. | Goods | Rate of tax/ Section |
|---|---|---|
| 7. | Scrap of (a) Plastic bottles | 4% as per Sl.No. 133 of notification No.FD 197 CSL 2005 (6), Dated:30.04.2005 upto 31.03.2010. From 01.04.2010, taxable at 5% in terms of the Notification-III No.FD 82 CSL 10, Dated:31.03.2010. |
| | (b) Glass bottles | 12.5% under Section 4(1)(b) of the KVAT Act, 2003 upto 31.03.2010. From 01.04.2010, taxable at 5% in terms of the Notification-III No.FD 82 CSL 10, Dated:31.03.2010. |
| 8. | Electronic component scrap | 12.5% under Section 4(1)(b) of the KVAT Act, 2003 upto 31.03.2010. From 01.04.2010, taxable at 5% in terms of the Notification-III No.FD 82 CSL 10, Dated:31.03.2010. |
| 9. | PVC cable scrap | 12.5% under Section 4(1)(b) of the KVAT Act, 2003 upto 31.03.2010. From 01.04.2010, taxable at 5% in terms of the Notification-III No.FD 82 CSL 10, Dated:31.03.2010. |

**PRADEEP SINGH KHAROLA**

PR-1007

Commissioner of Commercial Taxes,
(Karnataka), Bangalore.

**COMMERCIAL TAXES DEPARTMENT**

**PROCEEDINGS OF THE COMMISSIONER OF COMMERCIAL TAXES, (KARNATAKA), BANGALORE-CLARIFICATION UNDER SECTION 59(4) OF THE KARNATAKA VALUE ADDED TAX ACT, 2003**

**Sub:** KVAT Act, 2003- Clarification under Section 59(4) regarding the rate of tax applicable on (1) deoiled rice bran; (2) deoiled cakes of soya, sun flower and rape seed; and (3) bajra and jowar-reg.

**Ref:** Application Dated:17.02.2010 of Sri Amit Mehta, Proprietor, Max Chem Pharma, 129, between 8th and 9th Cross, 2nd Main, Chamarajpet, Bangalore-560 018.

In the application cited above, Sri Amit Mehta, Proprietor, Max Chem Pharma, 129, between 8th and 9th Cross, 2nd Main, Chamarajpet, Bangalore-560 018, has sought clarification regarding the rate of tax applicable on (1) deoiled rice bran; (2) deoiled cakes of soya, sun flower and rape seed; and (3) bajra and jowar.

2. Section 59(4) of the Karnataka Value Added Tax Act, 2003 empowers the Commissioner of Commercial Taxes to clarify the rate of tax payable under the Act, if he considers it necessary or expedient so to do, for the purpose of maintaining uniformity in the work of assessments and collection of revenue. It is examined and found that the clarification requested by the petitioner is within the scope of the aforesaid provision and it is necessary that the clarification be issued for the purpose of maintaining uniformity in the work of assessments and collection of revenue.

3. Hence the following clarification is issued.

**CLARIFICATION NO. CLR.CR.227/09-10, DATED:13TH MAY, 2010**

It is hereby clarified that the rates of tax applicable on the following goods are as indicated under:

| Sl. No. | Goods | Rate of tax/ Section |
|---|---|---|
| 1. | Deoiled rice bran | 4% under entry 45 of the Third Schedule to the KVAT Act, 2003 upto 31.03.2010 and 5% from 01.04.2010. |
| 2. | Deoiled cakes of soya, sun flower and rape seed | Exempt from tax under entry 5(ii) of the First Schedule to the KVAT Act, 2003. |
| 3. | Bajra and Jowar | Exempt from VAT under entry 16 of the First Schedule to the KVAT Act, 2003. |

**PRADEEP SINGH KHAROLA**

PR-1017

Commissioner of Commercial Taxes,

(Karnataka), Bangalore.

**ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ**

**ಅಧಿಸೂಚನೆ**

**ಸಂಖ್ಯೆ: ಆಕುಕ 275 ಹೆಚ್‌ಎಸ್‌ಹೆಚ್ 2010, ಬೆಂಗಳೂರು, ದಿನಾಂಕ:26ನೇ ಜೂನ್, 2010**

**ವಿಷಯ:** ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ವೈದ್ಯಾಧಿಕಾರಿಗಳನ್ನು ಎರಡು ವರ್ಷಗಳ ಎಂಪಿಹೆಚ್ ಸೇವಾನಿರತ ಸ್ನಾತಕೋತ್ತರ ವ್ಯಾಸಂಗಕ್ಕೆ ನಿಯೋಜಿಸುವ ಬಗ್ಗೆ.

**ಉಲ್ಲೇಖ:**ಆಯುಕ್ತರು, ಆಕುಕ ಸೇವೆಗಳು, ಬೆಂಗಳೂರು ಇವರ ಪತ್ರ ಸಂಖ್ಯೆ:ಜೆಆರ್‌ಓ (4) 16/10–11 ದಿನಾಂಕ:22.06.2010.

ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು ಇವರು ಮೇಲಿನ ಉಲ್ಲೇಖದ ಪತ್ರದಲ್ಲಿ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಈ ಕೆಳಕಂಡ ಮೂವರು ವೈದ್ಯಾಧಿಕಾರಿಗಳು National Institute of Epidemiology (NIE), Chennai ಇಲ್ಲಿ ಎಂ.ಪಿ.ಹೆಚ್. (ಸಾರ್ವಜನಿಕ ಆರೋಗ್ಯ) ವಿಷಯದಲ್ಲಿ ಎರಡು ವರ್ಷಗಳ ಸ್ನಾತಕೋತ್ತರ ವ್ಯಾಸಂಗಕ್ಕಾಗಿ ಆಯ್ಕೆಗೊಂಡಿದ್ದು, ಅವರುಗಳನ್ನು ನಿಯೋಜಿಸುವಂತೆ ಕೋರಿರುತ್ತಾರೆ. ಪ್ರಸ್ತಾವನೆಯನ್ನು ಪರಿಶೀಲಿಸಿ, ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ಅಪೆಂಡಿಕ್ಸ್–II "ಎ" ನಿಯಮ I ರನ್ವಯ ಈ ಕೆಳಕಂಡ ವೈದ್ಯಾಧಿಕಾರಿಗಳನ್ನು National Institute of Epidemiology (NIE), Chennai ಇಲ್ಲಿ ದಿನಾಂಕ:01.07.2010 ರಿಂದ ಪ್ರಾರಂಭವಾಗಲಿರುವ 2 ವರ್ಷಗಳ MPH ಸ್ನಾತಕೋತ್ತರ ವ್ಯಾಸಂಗಕ್ಕೆ ನಿಯೋಜಿಸಲಾಗಿದೆ.

1) Dr. K.S. Prakash, District Project Management Officer, District Health & Family Welfare Office, Mangalore, D.K. District.

2) Dr. N.S. Ravikumar, District Project Management Officer, District Health & Family Welfare Office, Madikeri, Kodagu District.

3) Dr. Raghavendra K.N. Medical Officer, I/c District R.C.H. Officer, District Health & Family Welfare Office, Madikeri, Kodagu District.

ನಿರ್ದೇಶಕರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಇವರು ಕರ್ನಾಟಕ ಸರ್ಕಾರಿ ಸೇವಾ ನಿಯಮಗಳಲ್ಲಿ ನಿಗದಿಪಡಿಸಿರುವಂತೆ ನಮೂನೆ–19 ಮತ್ತು 19–ಎ ರನ್ವಯ ಅಫಿಡವಿಟ್ ಮತ್ತು ಪೆನಾಲ್ಟಿ ಬಾಂಡ್‌ಅನ್ನು ಪಡೆದು ನಂತರ ಸ್ನಾತಕೋತ್ತರ ವ್ಯಾಸಂಗಕ್ಕೆ ಆಯ್ಕೆಯಾಗಿರುವ ಸೇವಾನಿರತ ವೈದ್ಯಾಧಿಕಾರಿಗಳನ್ನು ಕರ್ತವ್ಯದಿಂದ ಬಿಡುಗಡೆ ಮಾಡತಕ್ಕದ್ದು.

ಸದರಿ ಸೇವಾ ನಿರತ ವೈದ್ಯಾಧಿಕಾರಿಗಳಿಗೆ ಪ್ರತಿನಿಯೋಜನಾ ಸೌಲಭ್ಯ ಮಂಜೂರಾತಿಗಾಗಿ ಸಂಬಂಧಿಸಿದಂತೆ ಪರಿಶೀಲಿಸಿ ಪ್ರತ್ಯೇಕವಾಗಿ ಕ್ರಮಕೈಗೊಳ್ಳಲಾಗುವುದು.

ಈ ಆದೇಶವನ್ನು ಸರ್ಕಾರಿ ಆದೇಶ ಸಂಖ್ಯೆ: ಆಇ 02 ಎಸ್‌ಆರ್‌ಎ 2008 ದಿನಾಂಕ:05.06.2008ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ಪ್ರತ್ಯಾಯೋಜಿಸಿರುವ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಐ. ಹೇಮನಾಥ್**

ಪಿಆರ್–1023

ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ಸೇವೆಗಳು–1)

## ಸಹಕಾರ ಇಲಾಖೆ

## ಸಹಕಾರ ಸಂಘಗಳ ಉಪ ನಿಬಂಧಕರು, ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ ಇವರ ಕಛೇರಿ

**ಕ್ರ.ಸಂ.ಡಿಆರ್‌ಡಿ:ಸಮಾಪನೆ: ರದ್ಧತಿ: ಸಿಆರ್:22:09–10, ದಿನಾಂಕ:31ನೇ ಮಾರ್ಚ್, 2010**

**ವಿಷಯ:** ಸಮಾಪನೆಯಲ್ಲಿರುವ ಸಣ್ಣ ನೀರಾವರಿ ನೀರು ಬಳಕೆದಾರರ ಸಹಕಾರ ಸಂಘ ನಿ. ಗೌನಹಳ್ಳಿ, ಹಿರಿಯೂರು ತಾಲ್ಲೂಕು, ಇದರ ನೊಂದಣಿ ರದ್ಧತಿ ಮಾಡುವ ಬಗ್ಗೆ.

**ಉಲ್ಲೇಖ:** 1) ಈ ಕಛೇರಿ ಆದೇಶ ಸಂಖ್ಯೆ: ಡಿಆರ್‌ಡಿ: ಸಮಾಪನೆ: ಸಿಆರ್:22:09–10, ದಿನಾಂಕ:12.03.2010.

2) ಸಮಾಪನಾಧಿಕಾರಿಗಳು ಹಾಗೂ ಸಹಕಾರ ಅಭಿವೃದ್ಧಿ ಅಧಿಕಾರಿಗಳು ಹಿರಿಯೂರು ಸಣ್ಣ ನೀರಾವರಿ ನೀರು ಬಳಕೆದಾರರ ಸಹಕಾರ ಸಂಘ ನಿ., ಗೌನಹಳ್ಳಿ ಹಿರಿಯೂರು ತಾಲ್ಲೂಕು ಇವರ ಪತ್ರದ ಸಂಖ್ಯೆ: ಸಿಡಿಓ:ಹಿರಿಯೂರು: ಸಮಾಪನೆ:09–10, ದಿನಾಂಕ:30.03.2010.

**ಪ್ರಸ್ತಾವನೆ:**

ಪ್ರಸ್ತುತ ವಿಷಯ ಮತ್ತು ಉಲ್ಲೇಖಕ್ಕೆ ಸಂಬಂಧಿಸಿದಂತೆ ಸಣ್ಣ ನೀರಾವರಿ ಬಳಕೆದಾರರ ಸಹಕಾರ ಸಂಘ ನಿ., ಹಿರಿಯೂರು ಇದರ ನೋಂದಣಿ ಸಂಖ್ಯೆ: ಸನಿ:30:67/ಆರ್.ಜಿ.ಎನ್./30476/2000–01 ದಿನಾಂಕ:24.02.2001ರಂದು ನೋಂದಣಿಯಾಗಿದ್ದು ಸಂಘದ ಕಾರ್ಯಚಟುವಟಿಕೆಗಳನ್ನು ನಿರ್ವಹಿಸದೆ 9 ವರ್ಷಗಳಿಂದ ಸ್ಥಗಿತಗೊಂಡಿದ್ದು ಉಲ್ಲೇಖ (1)ರ ಆದೇಶದಲ್ಲಿ ಸಂಘವನ್ನು ಸಮಾಪನೆಗೊಳಿಸಿ ಸಹಕಾರ ಅಭಿವೃದ್ಧಿ ಅಧಿಕಾರಿ ಹಿರಿಯೂರು ಇವರನ್ನು ಸಂಘದ ಸಮಾಪನಾಧಿಕಾರಿಯನ್ನಾಗಿ ನೇಮಕ ಮಾಡಿದ್ದು ಸಮಾಪನಾಧಿಕಾರಿಗಳು ಸಂಘದ ಸದಸ್ಯರುಗಳಿಗೆ ಸಂಘದ ಪುನಃಶ್ಚೇತನದ ಬಗ್ಗೆ ಒಲವು ಇಲ್ಲದಿರುವುದನ್ನು ಮನಗಂಡು ದಿನಾಂಕ:30.03.2010 ರಂದು ನಡೆಸಿದ ಸಮಾಪನಾಧಿಕಾರಿಯವರ ನಡವಳಿ ರೀತ್ಯಾ ಬರತಕ್ಕ ಆಸ್ತಿಗಳನ್ನು ನಷ್ಟಕ್ಕೆ ವರ್ಗಾಯಿಸಿ ತೀರಿಸತಕ್ಕ ಜವಾಬ್ದಾರಿಗಳನ್ನು ಹೊಂದಾಣಿಕೆ ಮೂಲಕ ಆಸ್ತಿ ಜವಾಬ್ದಾರಿಗಳನ್ನು ಹೊಂದಾಣಿಕೆ ಮೂಲಕ ಆಸ್ತಿ ಜವಾಬ್ದಾರಿ ತಃಖ್ತೆಯನ್ನು ದಿನಾಂಕ:30.03.2010ರ ಅಂತ್ಯಕ್ಕೆ ಜಮಾ ಖರ್ಚು ಮಾಡಿ ಶೂನ್ಯಗೊಳಿಸಿರುತ್ತಾರೆ. ಈ ಹಿನ್ನೆಲೆಯಲ್ಲಿ ಸಂಘವನ್ನು ಯಥಾಸ್ಥಿತಿಯಲ್ಲಿ ಮುಂದುವರಿಸಿದಲ್ಲಿ ಸಂಘದ ಸದಸ್ಯರುಗಳಿಗಾಗಲೀ ಅಥವಾ ಸಾರ್ವಜನಿಕರಿಗಾಗಲೀ ಯಾವುದೇ ಪ್ರಯೋಜನ ಇಲ್ಲವೆಂದು ಪರಿಗಣಿಸಿ ಸಂಘದ ನೋಂದಣಿಯನ್ನು ರದ್ದುಗೊಳಿಸಲು ಸಮಾಪನಾಧಿಕಾರಿಗಳು ಸಲ್ಲಿಸಿರುವ ಉಲ್ಲೇಖ (2) ರ ಪ್ರಸ್ತಾವನೆಯಲ್ಲಿ ಸದರಿ ಸಂಘವನ್ನು ರದ್ದುಪಡಿಸಲು ಶಿಫಾರಸ್ಸು ಮಾಡಿರುತ್ತಾರೆ.

ಮೇಲಿನ ಕಾರಣಗಳಿಂದ ಹಾಗೂ ಸಮಾಪನಾಧಿಕಾರಿಗಳ ವರದಿಯ ಮೇರೆಗೆ ಸಂಘವನ್ನು ಮುಂದುವರೆಸುವುದು ಸೂಕ್ತವಲ್ಲವೆಂದು ಸಂಘದ ನೋಂದಣಿಯನ್ನು ರದ್ದುಗೊಳಿಸುವುದು ಸೂಕ್ತವೆಂದು ಮನಗಂಡು ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**"ಆದೇಶ"**

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ 75ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ:69: ಸಿಎಲ್‌ಎಂ:2001 ದಿನಾಂಕ:21.11.2001 ರ ಪ್ರಕಾರ ದತ್ತವಾದ ಅಧಿಕಾರದನ್ವಯ ಇಲ್ಯಾಸ್ ಉಲ್ಲಾ ಷರೀಫ್ ಸಹಕಾರ ಸಂಘಗಳ ಉಪನಿಬಂಧಕರು, ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ ಆದ ನಾನು ಸಣ್ಣ ನೀರಾವರಿ ನೀರು ಬಳಕೆದಾರರ ಸಹಕಾರ ಸಂಘ ನಿ., ಗೌನಹಳ್ಳಿ, ಹಿರಿಯೂರು ತಾಲ್ಲೂಕು, ಚಿತ್ರದುರ್ಗ ಜಿಲ್ಲೆ ಈ ಸಂಘದ ನೋಂದಣಿ ಸಂಖ್ಯೆ: ಸನಿ30:67: ಆರ್.ಜಿ.ಎನ್. 30476/2000–01 ದಿನಾಂಕ:24.02.2001 ನ್ನು ಈ ಕೂಡಲೇ ಜಾರಿಗೆ ಬರುವಂತೆ ರದ್ದುಪಡಿಸಿರುತ್ತೇನೆ. ಈ ದಿನದಿಂದ ಸದರಿ ಸಂಘವು ಅಸ್ತಿತ್ವವನ್ನು ಕಳೆದುಕೊಂಡಿರುತ್ತದೆ.

ಈ ಆದೇಶವನ್ನು ನನ್ನ ಸ್ವ ಸಹಿ ಮತ್ತು ಕಛೇರಿಯ ಮೊಹರಿನೊಂದಿಗೆ ಈ ದಿನ ದಿನಾಂಕ:31.03.2010 ರಂದು ಈ ಆದೇಶವನ್ನು ನೀಡಲಾಗಿದೆ.

ಸಹಕಾರ ಸಂಘಗಳ ಉಪ ನಿಬಂಧಕರು,
ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ.

ಪಿಆರ್–1024

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಉಪ ನಿಬಂಧಕರು, ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ ಇವರ ಕಛೇರಿ**

**ಕ್ರ.ಸಂ.ಡಿಆರ್‌ಡಿ:ಎಲ್‌ಕ್ಯೂಡಿ:ರದ್ಧತಿ: ಸಿಆರ್:12:2006–07, ದಿನಾಂಕ:30ನೇ ಜನವರಿ, 2010**

**ವಿಷಯ:** ಸಮಾಪನೆಯಲ್ಲಿರುವ ಯಳನಾಡು ತೆಂಗಿನ ನಾರಿನ ಮತ್ತು ನಾರಿನ ಸರಕುಗಳನ್ನು ಉತ್ಪಾದಿಸುವವರ ಮತ್ತು ಮಾರಾಟ ಮಾಡುವವರ ಸಹಕಾರ ಸಂಘ ನಿ. ಯಳನಾಡು ಹಿರಿಯೂರು ತಾಲ್ಲೂಕು, ಇದರ ನೊಂದಣಿ ರದ್ಧತಿ ಮಾಡುವ ಬಗ್ಗೆ.

**ಉಲ್ಲೇಖ:** 1) ಈ ಕಛೇರಿ ಆದೇಶ ಸಂಖ್ಯೆ: ಡಿಆರ್‌ಡಿ:ಡಿಎಲ್‌ಕ್ಯೂಡಿ:ಸಿಆರ್:70:1998–99, ದಿನಾಂಕ:30.09.1999.

2) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಚಿತ್ರದುರ್ಗ ಉಪವಿಭಾಗ, ಚಿತ್ರದುರ್ಗ ಇವರ ಪತ್ರದ ಸಂಖ್ಯೆ: ಸನಿ:30:ರದ್ಧತಿ:ಸಿಆರ್:43:09–2010, ದಿನಾಂಕ:22.01.2010.

3) ಸಂಘದ ಸಮಾಪನಾಧಿಕಾರಿಗಳು ಹಾಗೂ ಸಹಕಾರ ಅಭಿವೃದ್ಧಿ ಅಧಿಕಾರಿಗಳು ಹಿರಿಯೂರು ಇವರ ಪತ್ರದ ಸಂಖ್ಯೆ: ಸಿಡಿಓ:ಹಿರಿಯೂರು: ಸಮಾಪನೆ:2009–10, ದಿನಾಂಕ:16.01.2010.

**ಪ್ರಸ್ತಾವನೆ:**

ಪ್ರಸ್ತುತ ವಿಷಯ ಮತ್ತು ಉಲ್ಲೇಖಕ್ಕೆ ಸಂಬಂಧಿಸಿದಂತೆ ಸಂಘದ ಸಮಾಪನಾಧಿಕಾರಿಗಳು ದಿನಾಂಕ:11.01.2010ರಂದು ಸಂಘದ ಸಮಾಪನಾ ನಡವಳಿಯನ್ನು ನಡೆಸಿ ಸಂಘದಲ್ಲಿರುವ ಸರ್ಕಾರದ ಷೇರು ಮತ್ತು ಸಾಲವನ್ನು ಸರ್ಕಾರವು ಆದೇಶ ಸಂಖ್ಯೆ: ಸಇ/252/ಸಂ.ಮಾಸ: 2006(11) ಬೆಂಗಳೂರು ದಿನಾಂಕ:05.05.2007ರಲ್ಲಿ ಮನ್ನಾ ಮಾಡಿರುವುದರಿಂದ ಈ ಬಗ್ಗೆ ಸಂಘದಲ್ಲಿ ಜಮಾ ಖರ್ಚು ಮಾಡಿ ಜವಾಬ್ದಾರಿಯನ್ನು ಶೂನ್ಯಗೊಳಿಸಿ ಸಂಘದ ನೋಂದಣಿ ಸಂಖ್ಯೆಯನ್ನು ರದ್ದುಪಡಿಸಲು ಉಲ್ಲೇಖ (3) ರಲ್ಲಿ ಪ್ರಸ್ತಾವನೆಯನ್ನು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಚಿತ್ರದುರ್ಗ ಉಪವಿಭಾಗ, ಚಿತ್ರದುರ್ಗ ಇವರಿಗೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಚಿತ್ರದುರ್ಗ ಉಪವಿಭಾಗ, ಚಿತ್ರದುರ್ಗ ಇವರು ಉಲ್ಲೇಖ (2) ರಲ್ಲಿ ಪ್ರಸ್ತಾವನೆಯನ್ನು ಸಲ್ಲಿಸಿ ಸದರಿ ಸಂಘ ಕ್ರ.ಸಂಖ್ಯೆ: ಎಆರ್30:462/ ಆರ್‌ಸಿಎಸ್/8759/1985–86 ದಿನಾಂಕ:20.02.1986 ರಂದು ನೋಂದಣಿಯಾಗಿರುತ್ತದೆ. ಸಂಘದ ಕಾರ್ಯ ಚಟುವಟಿಕೆಗಳು ಸರಿಯಾಗಿ ನಡೆಯದೇ ಪೂರ್ಣವಾಗಿ ಸ್ಥಗಿತಗೊಂಡಿದ್ದರಿಂದ ಸಂಘದ ಆಡಳಿತ ಸಮಿತಿಯವರು ಸಂಘದ ಅಭಿವೃದ್ಧಿ ಬಗ್ಗೆ ಗಮನಹರಿಸುವಲ್ಲಿ ವಿಫಲವಾಗಿರುವುದರಿಂದ ಸಂಘವನ್ನು ಪುನಃಶ್ಚೇತನಗೊಳಿಸುವಲ್ಲಿ ಆಸಕ್ತಿ ಇಲ್ಲದೆ ಇರುವುದರಿಂದ ಉಲ್ಲೇಖ (1)ರ ಆದೇಶದಲ್ಲಿ ಸದರಿ ಸಂಘವನ್ನು ಸಮಾಪನೆಗೊಳಿಸಿ, ಸಹಕಾರ ಅಭಿವೃದ್ಧಿ ಅಧಿಕಾರಿ ಹಿರಿಯೂರು ಇವರನ್ನು ಸಮಾಪನಾಧಿಕಾರಿಯನ್ನಾಗಿ ನೇಮಕ ಮಾಡಲಾಗಿತ್ತು. ಸಂಘದ ಸಮಾಪನಾಧಿಕಾರಿಗಳು ದಿನಾಂಕ:11.01.2010ರಂದು ಸಂಘದ ಸಮಾಪನಾ ನಡವಳಿಕೆ ಮಾಡಿ ಸಂಘದ ಜಮಾ ಖರ್ಚು ಮಾಡಿ ಆಸ್ತಿ–ಜವಾಬ್ದಾರಿಯನ್ನು ಶೂನ್ಯಗೊಳಿಸಿರುತ್ತಾರೆ. ಆದ್ದರಿಂದ ಸದರಿ ಸಂಘದ ನೋಂದಣಿಯನ್ನು ರದ್ದುಗೊಳಿಸಲು ಸಹಕಾರ ಸಂಘಗಳ ಸಹಾಯಕ ನಿಬಂಧಕರು ಚಿತ್ರದುರ್ಗ ಇವರು ಶಿಫಾರಸ್ಸು ಮಾಡಿರುತ್ತಾರೆ. ಈ ಅಂಶವನ್ನು ಪರಿಗಣಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**"ಆದೇಶ"**

ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ 75ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ:69:ಸಿಎಲ್‌ಎಂ:2001 ದಿನಾಂಕ:21.11.2001ರ ಪ್ರಕಾರ ದತ್ತವಾದ ಅಧಿಕಾರದನ್ವಯ ಇಲ್ಯಾಸ್ ಉಲ್ಲಾ ಷರೀಫ್ ಸಹಕಾರ ಸಂಘಗಳ ಉಪನಿಬಂಧಕರು, ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ ಆದ ನಾನು ದತ್ತವಾದ ಅಧಿಕಾರವನ್ನು ಚಲಾಯಿಸುತ್ತಾ, ಸಮಾಪನೆಯಲ್ಲಿರುವ ಯಳನಾಡು ತೆಂಗಿನ ನಾರಿನ ಮತ್ತು ನಾರಿನ ಸರಕುಗಳನ್ನು ಉತ್ಪಾದಿಸುವವರ ಮತ್ತು ಮಾರಾಟ ಮಾಡುವವರ ಸಹಕಾರ ಸಂಘ ನಿ., ಯಳನಾಡು ಹಿರಿಯೂರು ತಾಲ್ಲೂಕು ಚಿತ್ರದುರ್ಗ ಜಿಲ್ಲೆ, ಈ ಸಂಘದ ನೋಂದಣಿಯನ್ನು ರದ್ದುಗೊಳಿಸಿ ಆದೇಶ ಹೊರಡಿಸಿರುತ್ತೇನೆ.

ಈ ರದ್ಧತಿಯ ಆದೇಶದ ದಿನಾಂಕದಿಂದ ಸದರಿ ಸಹಕಾರ ಸಂಘದ ಕಾರ್ಯಚಟುವಟಿಕೆಗಳು ನಿಂತು ಹೋಗಿರುತ್ತವೆಂದು ಭಾವಿಸಲ್ಪಡತಕ್ಕದ್ದು, ಈ ಸಂಘವು ಅಸ್ತಿತ್ವದಲ್ಲಿರುವುದಿಲ್ಲವೆಂದು ಪರಿಗಣಿಸತಕ್ಕದ್ದು ಹಾಗೂ ಕರ್ನಾಟಕ ಸಹಕಾರ ಸಂಘಗಳ ನಿಯಮ 1960 ನಿಯಮ 33(ಎಸ್) ರನ್ವಯ ಈ ಸಂಘದ ದಾಖಲಾತಿಗಳನ್ನು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಚಿತ್ರದುರ್ಗ ಉಪವಿಭಾಗ, ಚಿತ್ರದುರ್ಗ ಇವರ ಕಛೇರಿಯಲ್ಲಿಡಲು ಆದೇಶಿಸಿದೆ.

ಈ ಆದೇಶವನ್ನು ನನ್ನ ಸ್ವ ಸಹಿ ಮತ್ತು ಕಛೇರಿಯ ಮೊಹರಿನೊಂದಿಗೆ ಈ ದಿನ ದಿನಾಂಕ:30.01.2010 ರಂದು ಈ ಆದೇಶವನ್ನು ನೀಡಲಾಗಿದೆ.

ಸಹಕಾರ ಸಂಘಗಳ ಉಪ ನಿಬಂಧಕರು,
ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ.

ಪಿಆರ್-1025

## ಸಹಕಾರ ಇಲಾಖೆ

## ಸಹಕಾರ ಸಂಘಗಳ ಉಪ ನಿಬಂಧಕರು, ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ ಇವರ ಕಛೇರಿ

**ಕ್ರ.ಸಂ.ಡಿಆರ್‌ಡಿ:ಎಲ್‌ಕ್ಯೂಡಿ:ರದ್ಧತಿ: ಸಿಆರ್:12:2006-07, ದಿನಾಂಕ:30ನೇ ಜನವರಿ, 2010**

**ವಿಷಯ:** ಸಮಾಪನೆಯಲ್ಲಿರುವ ಯಲ್ಲದಕೆರೆ ವ್ಯವಸಾಯ ಸೇವಾ ಸಹಕಾರ ಸಂಘ ನಿ., ಯಲ್ಲದಕೆರೆ, ಹಿರಿಯೂರು ತಾಲ್ಲೂಕು ಇದರ ನೋಂದಣಿ ರದ್ಧತಿ ಬಗ್ಗೆ.

**ಉಲ್ಲೇಖ:** 1) ಈ ಕಛೇರಿಯ ಆದೇಶ ಸಂಖ್ಯೆ: ಡಿಆರ್‌ಡಿ:ಡಿಎಲ್‌ಕ್ಯೂಡಿ:ಸಿಆರ್:12:2006-07, ದಿನಾಂಕ:07.12.2006.
2) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಚಿತ್ರದುರ್ಗ ಉಪವಿಭಾಗ, ಚಿತ್ರದುರ್ಗ ಇವರ ಪತ್ರದ ಸಂಖ್ಯೆ: ಸನಿ:30:ರದ್ಧತಿ:ಸಿಆರ್:42:09-2010, ದಿನಾಂಕ:22.01.2010.

**ಪ್ರಸ್ತಾವನೆ:**

ಮೇಲ್ಕಂಡ ವಿಷಯ ಮತ್ತು ಉಲ್ಲೇಖಗಳಿಗೆ ಸಂಬಂಧಿಸಿದಂತೆ ಸದರಿ ಸಂಘದ ಕ್ರ.ಸಂಖ್ಯೆ:ಡಿಆರ್‌ಸಿಎಸ್:1159/1976-77 ದಿನಾಂಕ:15.09.1976 ರಂದು ನೋಂದಣಿಯಾಗಿರುತ್ತದೆ. ಸಂಘದ ಕಾರ್ಯ ಚಟುವಟಿಕೆಗಳು ಸರಿಯಾಗಿ ನಡೆಯದೇ ಪೂರ್ಣವಾಗಿ ಸ್ಥಗಿತಗೊಂಡಿದ್ದರಿಂದ ಸಂಘದ ಆಡಳಿತ ಸಮಿತಿಯವರು ಸಂಘದ ಅಭಿವೃದ್ಧಿ ಬಗ್ಗೆ ಗಮನಹರಿಸುವಲ್ಲಿ ವಿಫಲವಾಗಿರುವುದರಿಂದ ಸಂಘವನ್ನು ಪುನಃಶ್ಚೇತನಗೊಳಿಸುವಲ್ಲಿ ಆಸಕ್ತಿ ಇಲ್ಲದೆ ಇರುವುದನ್ನು ಭಾವಿಸಿ ಉಲ್ಲೇಖ (1) ರ ಆದೇಶದಲ್ಲಿ ಸಮಾಪನೆಗೊಳಿಸಿ, ಸಹಕಾರ ಅಭಿವೃದ್ಧಿ ಅಧಿಕಾರಿ ಹಿರಿಯೂರು ಇವರನ್ನು ಸಮಾಪನಾಧಿಕಾರಿಯನ್ನಾಗಿ ನೇಮಕ ಮಾಡಲಾಗಿತ್ತು. ಸಂಘದ ಸಮಾಪನಾಧಿಕಾರಿಗಳು ಸಂಘದ ಆಸ್ತಿ-ಜವಾಬ್ದಾರಿಯನ್ನು ವಿಲೇವಾರಿ ಮಾಡಿ ಆಸ್ತಿ ಜವಾಬ್ದಾರಿಯನ್ನು ಶೂನ್ಯಗೊಳಿಸಿ ಸಂಘದ ನೋಂದಣಿಯನ್ನು ರದ್ದುಗೊಳಿಸಲು ಸಹಕಾರ ಸಂಘಗಳ ಸಹಾಯಕ ನಿಬಂಧಕರು ಚಿತ್ರದುರ್ಗ ಇವರಿಗೆ ಪ್ರಸ್ತಾವನೆ ಸಲ್ಲಿಸಿದ್ದು, ಸಹಾಯಕ ನಿಬಂಧಕರು, ಚಿತ್ರದುರ್ಗ ಇವರು ಈ ಸಂಘದ ನೋಂದಣಿಯನ್ನು ರದ್ದುಪಡಿಸಲು ಉಲ್ಲೇಖ (2) ರಲ್ಲಿ ಶಿಫಾರಸ್ಸು ಮಾಡಿರುತ್ತಾರೆ. ಇವರ ಪ್ರಸ್ತಾವನೆಯನ್ನು ಪರಿಗಣಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**"ಆದೇಶ"**

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ 75ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ:69: ಸಿಎಲ್‌ಎಂ:2001 ದಿನಾಂಕ:21.11.2001 ರ ಪ್ರಕಾರ ದತ್ತವಾದ ಅಧಿಕಾರದನ್ವಯ ಇಲ್ಯಾಸ್ ಉಲ್ಲಾ ಷರೀಫ್ ಸಹಕಾರ ಸಂಘಗಳ ಉಪನಿಬಂಧಕರು, ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ ಆದ ನಾನು ದತ್ತವಾದ ಅಧಿಕಾರವನ್ನು ಚಲಾಯಿಸುತ್ತಾ, ಸಮಾಪನೆಯಲ್ಲಿರುವ ಯಲ್ಲದಕೆರೆ ವ್ಯವಸಾಯ ಸೇವಾ ಸಹಕಾರ ಸಂಘ ನಿ., ಹಿರಿಯೂರು ತಾಲ್ಲೂಕು, ಚಿತ್ರದುರ್ಗ ಜಿಲ್ಲೆ ಈ ಸಂಘದ ನೋಂದಣಿಯನ್ನು ರದ್ಧುಗೊಳಿಸಿ ಆದೇಶ ಹೊರಡಿಸಿರುತ್ತೇನೆ.

ಈ ರದ್ಧತಿಯ ಆದೇಶದ ದಿನಾಂಕದಿಂದ ಸದರಿ ಸಹಕಾರ ಸಂಘದ ಕಾರ್ಯಚಟುವಟಿಕೆಗಳು ನಿಂತು ಹೋಗಿರುತ್ತವೆಂದು ಭಾವಿಸಲ್ಪಡತಕ್ಕದ್ದು, ಈ ಸಂಘವು ಅಸ್ತಿತ್ವದಲ್ಲಿರುವುದಿಲ್ಲವೆಂದು ಪರಿಗಣಿಸತಕ್ಕದ್ದು ಹಾಗೂ ಕರ್ನಾಟಕ ಸಹಕಾರ ಸಂಘಗಳ ನಿಯಮ 1960 ನಿಯಮ 33(ಎಸ್) ರನ್ವಯ ಈ ಸಂಘದ ದಾಖಲಾತಿಗಳನ್ನು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಚಿತ್ರದುರ್ಗ ಉಪವಿಭಾಗ, ಚಿತ್ರದುರ್ಗ ಇವರ ಕಛೇರಿಯಲ್ಲಿಡಲು ಆದೇಶಿಸಿದೆ.

ಈ ಆದೇಶವನ್ನು ನನ್ನ ಸ್ವ ಸಹಿ ಮತ್ತು ಕಛೇರಿಯ ಮೊಹರಿನೊಂದಿಗೆ ಈ ದಿನ ದಿನಾಂಕ:30.01.2010 ರಂದು ಈ ಆದೇಶವನ್ನು ನೀಡಲಾಗಿದೆ.

ಸಹಕಾರ ಸಂಘಗಳ ಉಪ ನಿಬಂಧಕರು,
ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ.

ಪಿಆರ್-1026

**COMMERCE AND INDUSTRIES DEPARTMENT**

**NOTIFICATION**

**NO.CI 178 SGF 2009, Bangalore, Dated: 30th June, 2010**

Whereas it is necessary to make an order with a view to enabling M/s. Keerthi Industries Ltd., at Mustur Village, Yadgir Taluk, Yadgir District, to purchase the quantity of Sugar Cane required having regard to the crushing capacity of the factory, the availability of Sugarcane in the area where sugarcane is grown and the need for production of Sugar.

Now, therefore, in exercise of the powers conferred by clause 6,7,8 and 9 of the Sugarcane (Control) order 1966 read with CSR 1127, dated 16th July 1966 of the Government of India in the Ministry of Food, Agriculture, Community Development and Co-Operation (Department of Food) the Government of Karnataka hereby makes the following orders namely:-

**I. TITLE, COMMENCEMENT AND DURATION OF OPERATION:**

i) This Order may be called the Karnataka Sugarcane (Regulation of Distribution) M/s. Keerthi Industries Ltd., at Mustur Village, Yadgir Taluk, Yadgir District, order 2010.

ii) It shall come into force at once and shall remain in force till withdrawn or repealed subject to amendments as the State Government may make from time to time.

**2. DEFINITIONS: - In this order: -**

a. Factory means the premises of the factory at Mustur Village, Owned by M/s. Keerthi Industries Ltd., at Mustur Village, Yadgir Taluk, Yadgir District, including the precincts of such factory.
b. 'Form' means a form appended to this order.
c. Words and expressions used in this order but not defined shall have the meaning assigned to them in clause 2 of the Sugarcane (Control) order 1966.

3. Determination of the quantity of Sugarcane required by the factory and reservation of the area for supply of sugarcane.

i) The crushing capacity of M/s. Keerthi Industries Ltd., being 3500 TCD. The quantity of Sugarcane required by the factory during a year is about 6.00 Lakh M.Ts to 7.50 Lakh M.Ts.

ii) The factory shall secure the sugarcane determined under sub clause (2) from the areas specified in schedule-I to this order which shall be the area reserved temporarily in the interest of farmers for supplying sugarcane to the factory concerned, till the new factories, likely to come up in that area are established.

**4. FIXIATION OF QUANTITY OF SUGARCANE TO BE SUPPLIED BY THE GROWER: -**

Every grower of sugarcane in the area reserved temporarily as specified in Schedule-I shall supply to the factory ninety five percent of the sugarcane grown by each such grower Co-operative Society operating in the reserved area, through such society.

**5. AGREEMENT TO SUPPLY OR PURCHASE THE DETERMINED QUANTITY OF SUGARCANE.**

Every grower of sugarcane or a sugarcane grower Co-operative Society, supplying sugarcane to the factory and the factory shall enter in to agreement to supply or purchase as the case may be, the quantity of sugarcane determined under clause-4.

**6. PROHIBITION OF EXPORT OF SUGARCANE FROM AREA RESERVED TEMPORARILY.**

No. Sugarcane shall be exported from the area reserved temporarily except under and in accordance with the conditions of a permit issued by the Deputy Commissioner in Form-I of Schedule-II.

**7. ISSUE OF PERMITS:**

i. Application for the grant of a permit under clause-6 shall be made in form 2 of Schedule-II and shall be accompanied by a fee of Rs.5/- and an amount of Rs.100/- as security Deposit.

ii. If any condition of the permit is contravened, the Deputy Commissioner may after giving an opportunity to the person Concerned to show cause why the amount deposited by way of security or any part there of may not be forfeited, pass order forfeiting the whole or part of the amount deposited as security.

By Order and in the Name of the Governor of Karnataka,

**P. ANANDA KUMAR**

Desk Officer (Sugar)

Commerce and Industries Department.

**SCHEDULE –I**

Following 146 villages of Shahapur Taluk & Yadgir Taluk of Yadgir District are allocated temporarily to M/s.Keerthi Industries Ltd., (Sugar Factory) Mustur Village, Yadgir Taluk, Yadgir District, for supply of Sugarcane.

**Villages in Shahapur Taluk**

| | | |
|---|---|---|
| 1. Nalvadagi | 2. Nyakal | 3. Gulsaram |
| 4. Beranal | 5. Hulkal | 6. Babalada |
| 7. Geddesugur | 8. Halagera | 9. Gudihala |
| 10. Kumanur | 11. Ajirangi | 12. Kandehalli |
| 13. Konahalli | 14. Bellara | 15. Machanur |

**Villages in Yadgir Taluk**

| | | |
|---|---|---|
| 1. Yadagiri | 2. Halagera | 3. Abhaytumukur |
| 4. Muddhal | 5. Ranagundi | 6. Varkanahalli |
| 7. Hosahalli (M) | 8. Syadapura | 9. Balaheada |
| 10. Gudur | 11. Anur (K) | 12. Anur (G) |
| 13. Gondadagi | 14. Sangavar | 15. Balichakra |
| 16. Kalabelagundi | 17. Malgar | 18. Kouluru |
| 19. Yalgeri | 20. Kotulur | 21. Yadahalli |
| 22. Chamanahalli | 23. Hosagera | 24. Vaddahalli |
| 25. Ramasamudra | 26. Harakera (K) | 27. Hadagisamudra |
| 28. Thalaka | 29. Konkala | 30. Minasapur |
| 31. Chinnakara | 32. Hajalapur | 33. Anapur |
| 34. Masalavai | 35. Jaigrama | 36.Idalur |
| 37. Karanagi | 38. Gurumitakal | 39. Kakalavar |

| | | |
|---|---|---|
| 40. Chandaraki | 41. Putapaka | 42. Chavatla |
| 43. Gajarakota | 44. Chintanapalli | 45. Mannal |
| 46. Bilagundi | 47. Bimanahalli | 48. Kadechur |
| 49. Duppalli | 50. Madavar | 51. Hattikuni |
| 52. Bandalli | 53. Shahapur (K) | 54. Harakera (B) |
| 55. Eragola | 56. Alipura | 57. Porumba |
| 58. Yadagiri (K) | 59. Dastarabad | 60. Maskanhalli |
| 61. Bommanshettyhalli | 62.Naganayakanahalli | 63. R. Hosahalli |
| 64. Myalapura | 65. Mundaraga | 66. Koilur |
| 67. Pagalapura | 68. Mustur | 69. Hegganagera |
| 70. Sourastrahalli | 71. Daddal | 72. Rachanahalli |
| 73. Baddepalli | 74. Mavinahalli | 75. Bommraladoddi |
| 76. Samanapura | 77. Bachavara | 78. Yakkali |
| 79. Kysapanalli | 80. Kanchagarahalli | 81. Basavanthapura |
| 82. Belagera | 83. Santhara Hosahalli | 84. Karakambala |
| 85. Abola | 86. Ashanal | 87. K.Hosahalli |
| 88. Chintakunta | 89. Kotagera | 90. Motanalli |
| 91. Khanahalli | 92. Baggalamadu | 93. Pathapura |
| 94. Vadavatti | 95. Makasambara | 96. Kalabelagundi |
| 97. Gowdagera | 98.Killanakera | 99. Nilahalli |
| 100. Kanekala | 101. Sambara | 102.Gudlagunta |
| 103. Tottura | 104. Nagalapur | 105. Lingeri |
| 106. Ginakera | 107. Gopalapur | 108.Ganapura |
| 109. Nandepalli | 110.Thoranatippa | 111. Turakanadoddi |
| 112. Chaleri | 113. Sankalapur | 114. Goranura |
| 115. Narasapur (D) | 116. Kuntemari | 117. Nababurja |
| 118. Sultanpura | 119. Narayanpura | 120. Keshwara |
| 121. Mallapur | 122. Najapur | 123. Budura |
| 124. Himalapura | 125. Chapetala | 126. Yadlapur |
| 127. Yampada | 128. Tatalagera | 129. Pasapula |
| 130. Kandakura | 131. Mugadampura | |

CI 178 SGF 2009

**P. ANANDA KUMAR**
Desk Officer (Sugar)
Commerce and Industries Department.

**SCHEDULE –II - FORM -I**

**(SEE CLAUSE 6)**

The Karnataka Sugarcane (Regulation of Distribution), M/s. Keerthi Industries Ltd., at Mustur Village, Yadgir Taluk and Yadgir District Order 2010.

**Permit No.** **Date:**

1. Full name of the permit holder :
2. Father's Name :
3. Residential Address in full :
4. Quantity of Sugarcane for which permit is granted for export :
5. Area and village from which Sugarcane is permitted to be Exported. :
6. A. Place to which it is to be exported
   B. The purpose for which export is permitted.
   i. For Sale
   ii. For crushing sugar cane juice for Manufacture of Gur/Sakkare Gul/ Jaggery Rabi or Khandasari.
7. Their permit is valid up to :
8. The permit is granted subject to the following terms and conditions. :
   a) Permit is not transferable.
   b) The permit shall be produced on demand by an officer authorized by the Deputy Commissioner.
   c) On expiry of the validity of the permission within 48 hours of the expiry of the validity date the permit shall be surrendered to the permit issuing authority.

Place SIGNATURE OF THE PERMIT

Date ISSUING AUTHORITY.

**SCHEDULE –II - FORM -II**

**(SEE CLAUSE 7)**

The Karnataka Sugarcane (Regulation of Distribution), M/s. Keerthi Industries Ltd., at Mustur Village, Yadgir Taluk and Yadgir District Order 2010. Application for the grant of permit for exporting sugarcane from a reserved area.

1. Full Name of the Applicant :
2. Father's Name :

3. Residential Address in full :

4. Quantity of Sugarcane for which permit is requested for export :

5. Area and the village from which Sugarcane is intended to be exported :

6. The purpose for which the export is intended

i) For Sale :

ii) For Crushing Sugarcane Juice or manufacture of Gur/Sakkare Gul/Jaggery/Rabi/or Khandasari for sale or self consumption :

I declare that, I am fully aware of the provisions of the Karnataka Sugarcane (Regulation of Distribution), M/s. Keerthi Industries Ltd., at Mustur Village, Yadgir Taluk and Yadgir District, Order 2010 and the particulars furnished in the application are true to the best of my knowledge and belief and the permit to be issued will be properly used for the purpose for which it is issued. I have actually read-got read and understood the conditions of the permit given in Form No.I of the Schedule appended to the Karnataka Sugarcane (Regulation of Distribution), M/s. Keerthi Industries Ltd., at Mustur village, Yadgir Taluk and Yadgir District, Order 2010, and I agree to abide by them.

Place:

Date: SIGNATURE OF THE APPLICANT.

**P. ANANDA KUMAR**

PR-1078 Desk Officer (Sugar)

Commerce and Industries Department.

**ಜಿಲ್ಲಾ ಅಧಿಕಾರಿಗಳ ಕಛೇರಿ, ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆ,**

**ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು**

**ಪ್ರಕಟಣೆ**

**ಸಂಖ್ಯೆ:ಡಿಬಿಸಿಎಂ/ನ/ಕಾತಭ/ಸಿಆರ್–8/2010–11, ಬೆಂಗಳೂರು, ದಿನಾಂಕ:12ನೇ ಜುಲೈ, 2010**

**ವಿಷಯ:** 2010–11ನೇ ಸಾಲಿನಲ್ಲಿ ಬೆಂಗಳೂರು ನಗರ ಜಿಲ್ಲೆಯ ಹಿಂದುಳಿದ ವರ್ಗಗಳ ಕಾನೂನು ಪದವೀಧರರನ್ನು ನ್ಯಾಯಾಂಗ ಆಡಳಿತ ಹಾಗೂ ವಕೀಲ ವೃತ್ತಿಯ ತರಬೇತಿಗೆ ಅಭ್ಯರ್ಥಿಗಳಿಂದ ಅರ್ಜಿಗಳನ್ನು ಆಹ್ವಾನಿಸುವ ಬಗ್ಗೆ.

**ಉಲ್ಲೇಖ:** 1) ಸರ್ಕಾರಿ ಆದೇಶ ಸಂಖ್ಯೆ: ಎಸ್.ಡಬ್ಲ್ಯೂಎಲ್. 68 ಎಸ್.ಇ.ಡಬ್ಲ್ಯೂ 89, ದಿನಾಂಕ:02.11.1990.

2) ಸರ್ಕಾರದ ಆದೇಶ ಸಂಖ್ಯೆ: ಸಕಇ/205 ಬಿಎಂಎಸ್ 99, ದಿನಾಂಕ:07.10.1999.

2010–11ನೇ ಸಾಲಿನಲ್ಲಿ ಬೆಂಗಳೂರು ಗ್ರಾಮಾಂತರ ಜಿಲ್ಲೆಗೆ ಸೇರಿರುವ ಹಿಂದುಳಿದ ವರ್ಗಗಳಿಗೆ ಸೇರಿದ ಪ್ರವರ್ಗ–1, 2ಎ, 3ಎ ಮತ್ತು 3ಬಿ ವರ್ಗಗಳಿಗೆ ಸೇರಿದ ಕಾನೂನು ಪದವೀದರರಿಂದ ನ್ಯಾಯಾಂಗ ಆಡಳಿತದಲ್ಲಿ ಹಾಗೂ ವಕೀಲ ವೃತ್ತಿಯ ತರಬೇತಿ ಭತ್ಯೆ ಮಂಜೂರಾತಿಗಾಗಿ ಅಭ್ಯರ್ಥಿಗಳನ್ನು ಆಯ್ಕೆ ಮಾಡಲು ಅರ್ಜಿಗಳನ್ನು ಆಹ್ವಾನಿಸಲಾಗಿದೆ.

ಹಿಂದುಳಿದ ವರ್ಗಗಳಿಗೆ ಸೇರಿದ ಈ ಕೆಳಕಂಡ ನಿಬಂಧನೆಗಳನ್ನು ಪಾಲಿಸಬಲ್ಲ ಕಾನೂನು ಪದವೀಧರರ ಅಭ್ಯರ್ಥಿಗಳು ನಿಗದಿತ ಅರ್ಜಿ ನಮೂನೆಯನ್ನು ಈ ಕಛೇರಿಯಲ್ಲಿ ಪಡೆದು ಭರ್ತಿ ಮಾಡಿದ ಅರ್ಜಿಗಳನ್ನು ಸದಸ್ಯ ಕಾರ್ಯದರ್ಶಿಗಳು ಹಾಗೂ ಜಿಲ್ಲಾ ಅಧಿಕಾರಿಗಳು, ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆ, ಬೆಂಗಳೂರು ನಗರ ಜಿಲ್ಲೆ, 1ನೇ ಮಹಡಿ, ಪೋಡಿಯಂ ಬ್ಲಾಕ್, ವಿಶ್ವೇಶ್ವರಯ್ಯ ಗೋಪುರ, ಡಾ: ಅಂಬೇಡ್ಕರ್ ವೀದಿ, ಬೆಂಗಳೂರು ಇವರ ಕಛೇರಿಯಲ್ಲಿ ದಿನಾಂಕ:16.08.2010ರೊಳಗಾಗಿ ಸಲ್ಲಿಸುವುದು.

**ನಿಬಂಧನೆಗಳು:**

1) ಅಭ್ಯರ್ಥಿಯು ಬೆಂಗಳೂರು ನಗರ ಜಿಲ್ಲೆಗೆ ಸೇರಿದವರಾಗಿರಬೇಕು.

2) ಅಭ್ಯರ್ಥಿಯು ವರ್ಗ–1, 2ಎ, 3ಎ ಮತ್ತು 3ಬಿ ವರ್ಗಕ್ಕೆ ಸೇರಿದವರಾಗಿರಬೇಕು.

3) ಪ್ರವರ್ಗ–1ರಡಿ ಬರುವ ಅಭ್ಯರ್ಥಿಗಳಿಗೆ ಆದಾಯದ ಮಿತಿ ಇರುವುದಿಲ್ಲ. ಇತರೆ ಹಿಂದುಳಿದ ವರ್ಗಗಳ ಅಭ್ಯರ್ಥಿಗಳಿಗೆ ರೂ.15000ಗಳ ವಾರ್ಷಿಕ ಆದಾಯದ ಮಿತಿಯನ್ನು ನಿಗದಿಪಡಿಸಿದೆ.

4) ಅಭ್ಯರ್ಥಿಯು ಬಾರ್ ಕೌನ್ಸಿಲ್‌ನಲ್ಲಿ ಹೆಸರನ್ನು ನೊಂದಾಯಿಸಿರಬೇಕು.

5) ಅಭ್ಯರ್ಥಿಯು ಅರ್ಜಿ ಸಲ್ಲಿಸಲು ನಿಗದಿಪಡಿಸಿರುವ ಕೊನೆಯ ದಿನಾಂಕಕ್ಕೆ ಅಭ್ಯರ್ಥಿಯು 2 ವರ್ಷದೊಳಗೆ ಕಾನೂನು ಪದವಿ ಪರೀಕ್ಷೆಯಲ್ಲಿ ಉತ್ತೀರ್ಣರಾಗಿರಬೇಕು.

6) ಅಭ್ಯರ್ಥಿಯು ಅರ್ಜಿ ಸಲ್ಲಿಸಲು ನಿಗದಿಪಡಿಸಿದ ಕಡೆಯ ದಿನಾಂಕಕ್ಕೆ ಅಭ್ಯರ್ಥಿಯ ವಯಸ್ಸು 30 ವರ್ಷಗಳ ವಯೋಮಿತಿಯಲ್ಲಿರಬೇಕು.

7) ಆಯ್ಕೆಯಾದ ಅಭ್ಯರ್ಥಿಗಳಿಗೆ 4 ವರ್ಷಗಳ ತರಬೇತಿ ಭತ್ಯೆ ನೀಡಲಾಗುವುದು ಮತ್ತು ಮಾಹೆಯಾನ ರೂ.1000–00ಗಳ ತರಬೇತಿ ಭತ್ಯೆ ನೀಡಲಾಗುವುದು.

8) ಅಭ್ಯರ್ಥಿಯು ತರಬೇತಿಯನ್ನು ಮಧ್ಯದಲ್ಲಿ ಬಿಡುವಂತಿಲ್ಲ. ಈ ಬಗ್ಗೆ ಒಂದು ಮುಚ್ಚಳಿಕೆ ಪತ್ರ ನೀಡಬೇಕು. ಒಂದು ವೇಳೆ ಸರ್ಕಾರಿ ಉದ್ಯೋಗ ದೊರಕಿದಲ್ಲಿ ಅಥವಾ ನ್ಯಾಯಾಧಿಕಾರಿಯಾಗಿ ನೇಮಕಾತಿ ಹೊಂದಿದಲ್ಲಿ ಜಿಲ್ಲಾ ಸಮಿತಿಯ ಗಮನಕ್ಕೆ ತಂದು ತರಬೇತಿ ಬಿಡಬಹುದು. ವಿಶೇಷ ಸಂದರ್ಭದಲ್ಲಿ ತರಬೇತಿ ಬಿಡಬೇಕಾದಲ್ಲಿ ಸರ್ಕಾರದ ಅನುಮತಿ ಪಡೆಯಬೇಕು.

9) ಆಯ್ಕೆಯಾದ ಅಭ್ಯರ್ಥಿಗಳು ಜಿಲ್ಲಾ ಪಬ್ಲಿಕ್ ಪ್ರಾಸಿಕ್ಯೂಟರ್, ಸರ್ಕಾರಿ ವಕೀಲರು ಅಥವಾ ಕನಿಷ್ಠ 20 ವರ್ಷಗಳ ವಕೀಲ ವೃತ್ತಿಯಲ್ಲಿ ಅನುಭವವುಳ್ಳ ಯಾವುದೇ ವಕೀಲರ ಅಧೀನದಲ್ಲಿ ತರಬೇತಿಗೆ ನಿಯೋಜಿಸಲಾಗುವುದು.

10) ಅರ್ಜಿಯ ಜೊತೆಯಲ್ಲಿ ಅವಶ್ಯ ಮಾಹಿತಿಗಳಾದ ಕಾನೂನು ಪದವಿ ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿದ ಪ್ರಮಾಣ ಪತ್ರ, ಅಂಕ ಪಟ್ಟಿಗಳ ದೃಢೀಕರಣ ಪ್ರತಿ, ಎಸ್.ಎಸ್.ಎಲ್.ಸಿ. ಅಂಕಪಟ್ಟಿ, ವರ್ಗಾವಣೆ ಪತ್ರದ ದೃಢೀಕರಣ ಪ್ರತಿಗಳನ್ನು ದೃಢೀಕರಿಸಿ ಸಲ್ಲಿಸಬೇಕು.

11) ಅರ್ಹ ಅಭ್ಯರ್ಥಿಗಳಿಗೆ ಆಯ್ಕೆ ಸಮಿತಿಯ ಸಂದರ್ಶನದ ದಿನಾಂಕ ಹಾಗೂ ಸ್ಥಳವನ್ನು ತಿಳಿಸಲಾಗುವುದು. ಸಂದರ್ಶನಕ್ಕೆ ಅಭ್ಯರ್ಥಿಗಳು ಸ್ವಂತ ಖರ್ಚಿನಲ್ಲಿ ಹಾಜರಾಗತಕ್ಕದ್ದು.

ಹೆಚ್ಚಿನ ಮಾಹಿತಿಗಾಗಿ ಅಭ್ಯರ್ಥಿಗಳು ಜಿಲ್ಲಾ ಅಧಿಕಾರಿಗಳ ಕಛೇರಿ, ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆ, ಬೆಂಗಳೂರು ನಗರ ಜಿಲ್ಲೆ, 1ನೇ ಮಹಡಿ, ಪೋಡಿಯಂ ಬ್ಲಾಕ್, ವಿಶ್ವೇಶ್ವರಯ್ಯ ಗೋಪುರ, ಡಾ: ಅಂಬೇಡ್ಕರ್ ವೀದಿ, ಬೆಂಗಳೂರು–1, ಇವರ ಕಛೇರಿಯಲ್ಲಿ ಕೆಲಸದ ವೇಳೆಯಲ್ಲಿ ಪಡೆಯುವುದು.

ಭರ್ತಿ ಮಾಡಿದ ಅರ್ಜಿಗಳನ್ನು ಸದಸ್ಯ ಕಾರ್ಯದರ್ಶಿಗಳು ಹಾಗೂ ಜಿಲ್ಲಾ ಅಧಿಕಾರಿಗಳು, ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆ, ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು, ಇವರಿಗೆ ಸಲ್ಲಿಸುವುದು. ಅವಧಿ ಮೀರಿ ಬಂದ ಅರ್ಜಿಗಳನ್ನು ತಿರಸ್ಕರಿಸಲಾಗುವುದು.

ಸದಸ್ಯ ಕಾರ್ಯದರ್ಶಿಗಳು ಹಾಗೂ ಜಿಲ್ಲಾ ಅಧಿಕಾರಿಗಳು,
ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆ,
ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು.

ಪಿ.ಆರ್.1082

**ಕರ್ನಾಟಕ ವಿಧಾನ ಪರಿಷತ್ತು**

**ವಿಧಾನ ಪರಿಷತ್ತಿನ ಸಚಿವಾಲಯ, ಅಂಚೆ ಪೆಟ್ಟಿಗೆ ಸಂಖ್ಯೆ:5079, ವಿಧಾನಸೌಧ, ಬೆಂಗಳೂರು–560 001**

**ಸಂಖ್ಯೆ: ಕವಿಪ/ಶಾರಶಾ/138/ಇತರೆ/2007–10, ದಿನಾಂಕ:12ನೇ ಜುಲೈ, 2010**

**ವಿಷಯ:** ಕರ್ನಾಟಕ ವಿಧಾನ ಪರಿಷತ್ತಿನ ಸದಸ್ಯರಾದ ಶ್ರೀ ಎಸ್. ನಾಗರಾಜು (ಸಂದೇಶ್ ನಾಗರಾಜು) ಇವರ ವಿಳಾಸ ಬದಲಾವಣೆಯ ಬಗ್ಗೆ.

ವಿಧಾನ ಪರಿಷತ್ತಿನ ಮಾನ್ಯ ಸದಸ್ಯರಾದ ಶ್ರೀ ಎಸ್. ನಾಗರಾಜು (ಸಂದೇಶ್ ನಾಗರಾಜು) ರವರ ಹೆಸರಿಗೆ ಕಳುಹಿಸುವ ಎಲ್ಲಾ ಪತ್ರ ಹಾಗೂ ಮಾಹಿತಿಗಳನ್ನು ಈ ಕೆಳಕಂಡ ವಿಳಾಸಕ್ಕೆ ಕಳುಹಿಸಿಕೊಡಬೇಕೆಂದು ಕೋರಿರುವ ಹಿನ್ನಲೆಯಲ್ಲಿ, ವಿಳಾಸ ಬದಲಾವಣೆ ಬಗ್ಗೆ ರಾಜ್ಯಪತ್ರದಲ್ಲಿ ಪ್ರಕಟಿಸಿ ಎಲ್ಲಾ ಇಲಾಖೆಗಳ ಮಾಹಿತಿಗಾಗಿ ರವಾನಿಸಲು ಕ್ರಮ ಕೈಗೊಳ್ಳಬೇಕೆಂದು ಕೋರಲು ನಿರ್ದೇಶಿತನಾಗಿದ್ದೇನೆ.

ಶ್ರೀ ಎಸ್. ನಾಗರಾಜು (ಸಂದೇಶ್ ನಾಗರಾಜು),
ವಿಧಾನ ಪರಿಷತ್ತಿನ ಸದಸ್ಯರು, ನಂ.1 ಮತ್ತು 2,
ಜಲಕೃಪಾ ಅಪಾರ್ಟ್‌ಮೆಂಟ್ಸ್, ಯಮುನಬಾಯಿ ರಸ್ತೆ, ಮಾಧವನಗರ, ಬೆಂಗಳೂರು–560 001.

**ಎನ್. ಬಾಲಗುರು**

ಪಿ.ಆರ್.1097

ಅಧೀನ ಕಾರ್ಯದರ್ಶಿ,
ಕರ್ನಾಟಕ ವಿಧಾನ ಪರಿಷತ್ತು.

**ಜಿಲ್ಲಾ ಅಧಿಕಾರಿಗಳ ಕಛೇರಿ, ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆ,**
**ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು**

**ಪ್ರಕಟಣೆ**

**ಸಂಖ್ಯೆ:ಡಿಬಿಸಿಎಂ/ನ/ಕಾತಭ/ಸಿಆರ್–15/2008–09, ಬೆಂಗಳೂರು, ದಿನಾಂಕ:12ನೇ ಜುಲೈ, 2010**

**ವಿಷಯ:** 2010–11ನೇ ಸಾಲಿನಲ್ಲಿ ಬೆಂಗಳೂರು ನಗರ ಜಿಲ್ಲೆಯ ಮತೀಯ ಅಲ್ಪಸಂಖ್ಯಾತರ ಕಾನೂನು ಪದವೀಧರರಿಗೆ ತರಬೇತಿ ಭತ್ಯೆ ನೀಡುವ ಬಗ್ಗೆ.

**ಉಲ್ಲೇಖ:** 1) ಸರ್ಕಾರಿ ಆದೇಶ ಸಂಖ್ಯೆ:ಸಕಇ/205 ಬಿಎಂಎಸ್ 99, ದಿನಾಂಕ:07.10.1999.

ಬೆಂಗಳೂರು ನಗರ ಜಿಲ್ಲೆಯ ಮತೀಯ ಅಲ್ಪಸಂಖ್ಯಾತರ ಗುಂಪಿಗೆ ಸೇರಿದ ಮುಸ್ಲಿಂ, ಕ್ರಿಶ್ಚಿಯನ್, ಜೈನರು, ಸಿಖ್ಖರು, ಪಾರ್ಸಿ ಮುಂತಾದ ಸಮುದಾಯಕ್ಕೆ ಸೇರಿದ ಕಾನೂನು ಪದವೀಧರರಿಗೆ ವಕೀಲ ವೃತ್ತಿ ಮತ್ತು ನ್ಯಾಯಾಂಗ ಸೇವೆಯಲ್ಲಿ ತರಬೇತಿ ಪಡೆಯಲು ಈ ಕೆಳಕಂಡ ನಿಬಂಧನೆಗಳಿಗೆ ಒಳಪಟ್ಟು 2010–11ನೇ ಸಾಲಿಗೆ ಅರ್ಜಿಗಳನ್ನು ಆಹ್ವಾನಿಸಲಾಗಿದೆ. ಅರ್ಜಿ ನಮೂನೆಗಳನ್ನು ಈ ಕಛೇರಿಯಿಂದ ಪಡೆದು ಭರ್ತಿ ಮಾಡಿದ ಅರ್ಜಿಗಳನ್ನು ದಿನಾಂಕ:16.08.2010 ರೊಳಗಾಗಿ ಈ ಕಛೇರಿಗೆ ಸಲ್ಲಿಸುವುದು.

**ನಿಬಂಧನೆಗಳು:**

1) ಬೆಂಗಳೂರು ನಗರ ಜಿಲ್ಲಾ ವ್ಯಾಪ್ತಿಗೆ ಸಂಬಂಧಿಸಿದಂತೆ ಅಲ್ಪಸಂಖ್ಯಾತರ ಕಾನೂನು ಪದವೀಧರರು ಮಾತ್ರ ಈ ತರಬೇತಿಗೆ ಅರ್ಹರಾಗಿರುತ್ತಾರೆ.

2) ಕಾನೂನು ತರಬೇತಿ ಪಡೆಯುವ ಅಭ್ಯರ್ಥಿಯು ಮುಸ್ಲಿಂ, ಕ್ರಿಶ್ಚಿಯನ್, ಜೈನರು, ಸಿಖ್ಖರು, ಪಾರ್ಸಿ ಮುಂತಾದ ಸಮುದಾಯಗಳಲ್ಲಿ ಯಾವುದಾದರೊಂದು ಸಮುದಾಯಕ್ಕೆ ಸೇರಿದವರಾಗಿರಬೇಕು.

3) ಅಭ್ಯರ್ಥಿಯ ವಾರ್ಷಿಕ ಆದಾಯವು ರೂ.15000/– ಕ್ಕೆ ಮೀರಿರಬಾರದು. ಪ್ರವರ್ಗ–1ರಡಿ ಬರುವ ಅಲ್ಪಸಂಖ್ಯಾತರ ಅಭ್ಯರ್ಥಿಗಳಿಗೆ ಆದಾಯ ಮಿತಿ ಇರುವುದಿಲ್ಲ.

4) ಅಭ್ಯರ್ಥಿಯು ಬಾರ್ ಕೌನ್ಸಿಲ್‌ನಲ್ಲಿ ಹೆಸರನ್ನು ನೊಂದಾಯಿಸಿರಬೇಕು.

5) ಅಭ್ಯರ್ಥಿಯು ಅರ್ಜಿ ಸಲ್ಲಿಸಲು ನಿಗದಿಪಡಿಸಿರುವ ಕೊನೆಯ ದಿನಾಂಕಕ್ಕೆ 2 ವರ್ಷದೊಳಗೆ ಕಾನೂನು ಪದವಿ ಪರೀಕ್ಷೆಯಲ್ಲಿ ಉತ್ತೀರ್ಣರಾಗಿರಬೇಕು.

6) ಅಭ್ಯರ್ಥಿಯು ಅರ್ಜಿ ಸಲ್ಲಿಸಲು ನಿಗದಿಪಡಿಸಿದ ಕಡೆಯ ದಿನಾಂಕಕ್ಕೆ ಅಭ್ಯರ್ಥಿಯ ವಯಸ್ಸು 30 ವರ್ಷಗಳ ವಯೋಮಿತಿಯಲ್ಲಿರಬೇಕು.

7) ಆಯ್ಕೆಯಾದ ಅಭ್ಯರ್ಥಿಗಳಿಗೆ 4 ವರ್ಷಗಳ ತರಬೇತಿ ಭತ್ಯೆ ನೀಡಲಾಗುವುದು ಮತ್ತು ಮಾಹೆಯಾನ ರೂ.1000–00 ಗಳ ತರಬೇತಿ ಭತ್ಯೆ ನೀಡಲಾಗುವುದು.

8) ಅಭ್ಯರ್ಥಿಯು ತರಬೇತಿಯನ್ನು ಮಧ್ಯದಲ್ಲಿ ಬಿಡುವಂತಿಲ್ಲ. ಈ ಬಗ್ಗೆ ಒಂದು ಮುಚ್ಚಳಿಕೆ ಪತ್ರ ನೀಡಬೇಕು. ಒಂದು ವೇಳೆ ಸರ್ಕಾರಿ ಉದ್ಯೋಗ ದೊರಕಿದಲ್ಲಿ ಅಥವಾ ನ್ಯಾಯಾಧಿಕಾರಿಯಾಗಿ ನೇಮಕಾತಿ ಹೊಂದಿದಲ್ಲಿ ಜಿಲ್ಲಾ ಸಮಿತಿಯ ಗಮನಕ್ಕೆ ತಂದು ತರಬೇತಿ ಬಿಡಬಹುದು. ವಿಶೇಷ ಸಂದರ್ಭದಲ್ಲಿ ತರಬೇತಿ ಬಿಡಬೇಕಾದಲ್ಲಿ ಸರ್ಕಾರದ ಅನುಮತಿ ಪಡೆಯಬೇಕು.

9) ಆಯ್ಕೆಯಾದ ಅಭ್ಯರ್ಥಿಗಳು ಜಿಲ್ಲಾ ಪಬ್ಲಿಕ್ ಪ್ರಾಸಿಕ್ಯೂಟರ್, ಸರ್ಕಾರಿ ವಕೀಲರು ಅಥವಾ ಕನಿಷ್ಟ 20 ವರ್ಷಗಳ ವಕೀಲ ವೃತ್ತಿಯಲ್ಲಿ ಅನುಭವವುಳ್ಳ ಯಾವುದೇ ವಕೀಲರ ಅಧೀನದಲ್ಲಿ ತರಬೇತಿಗೆ ನಿಯೋಜಿಸಲಾಗುವುದು.

10) ಅರ್ಜಿಯ ಜೊತೆಯಲ್ಲಿ ಅವಶ್ಯ ಮಾಹಿತಿಗಳಾದ ಕಾನೂನು ಪದವಿ ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿದ ಪ್ರಮಾಣ ಪತ್ರ, ಅಂಕ ಪಟ್ಟಿಗಳ ದೃಢೀಕರಣ ಪ್ರತಿ, ಎಸ್.ಎಸ್.ಎಲ್.ಸಿ. ಅಂಕಪಟ್ಟಿ, ವರ್ಗಾವಣೆ ಪತ್ರದ ದೃಢೀಕರಣ ಪ್ರತಿಗಳನ್ನು ದೃಢೀಕರಿಸಿ ಸಲ್ಲಿಸಬೇಕು.

11) ಅರ್ಹ ಅಭ್ಯರ್ಥಿಗಳಿಗೆ ಆಯ್ಕೆ ಸಮಿತಿಯ ಸಂದರ್ಶನದ ದಿನಾಂಕ ಹಾಗೂ ಸ್ಥಳವನ್ನು ತಿಳಿಸಲಾಗುವುದು. ಸಂದರ್ಶನಕ್ಕೆ ಅಭ್ಯರ್ಥಿಗಳು ಸ್ವಂತ ಖರ್ಚಿನಲ್ಲಿ ಹಾಜರಾಗತಕ್ಕದ್ದು.

ಹೆಚ್ಚಿನ ಮಾಹಿತಿಗಾಗಿ ಅಭ್ಯರ್ಥಿಗಳು ಜಿಲ್ಲಾ ಅಧಿಕಾರಿಗಳ ಕಛೇರಿ, ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆ, ಬೆಂಗಳೂರು ನಗರ ಜಿಲ್ಲೆ, 1ನೇ ಮಹಡಿ, ಪೋಡಿಯಂ ಬ್ಲಾಕ್, ವಿಶ್ವೇಶ್ವರಯ್ಯ ಗೋಪುರ, ಡಾ: ಅಂಬೇಡ್ಕರ್ ವೀದಿ, ಬೆಂಗಳೂರು–1, ಇವರ ಕಛೇರಿಯಲ್ಲಿ ಕೆಲಸದ ವೇಳೆಯಲ್ಲಿ ಪಡೆಯಬಹುದಾಗಿದೆ.

ಭರ್ತಿ ಮಾಡಿದ ಅರ್ಜಿಗಳನ್ನು ಸದಸ್ಯ ಕಾರ್ಯದರ್ಶಿಗಳು ಹಾಗೂ ಜಿಲ್ಲಾ ಅಧಿಕಾರಿಗಳು, ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆ, ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು, ಇವರಿಗೆ ಸಲ್ಲಿಸುವುದು. ಅವಧಿ ಮೀರಿ ಬಂದ ಅರ್ಜಿಗಳನ್ನು ತಿರಸ್ಕರಿಸಲಾಗುವುದು.

ಸದಸ್ಯ ಕಾರ್ಯದರ್ಶಿಗಳು ಹಾಗೂ ಜಿಲ್ಲಾ ಅಧಿಕಾರಿಗಳು,
ಪಿ.ಆರ್.1083 ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆ,
ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು.

**ಸಮಾಜ ಕಲ್ಯಾಣ ಇಲಾಖೆ**

**ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿಗಳ ಕಛೇರಿ, ಸ್ಟೇಷನ್ ಏರಿಯಾ, ಐ.ಬಿ. ರೋಡ್, ರಾಯಚೂರು**

**ಪ್ರಕಟಣೆ**

**ಸಂಖ್ಯೆ:ಜಿಸಕಅರಾ/8/ಕಾಪತ/ಸಿಆರ್–1/2010–11, ದಿನಾಂಕ:23ನೇ ಜೂನ್, 2010**

**ವಿಷಯ:** 2010–11ನೇ ಸಾಲಿನಲ್ಲಿ ಕಾನೂನು ಪದವೀಧರರನ್ನು ಆಡಳಿತ ನ್ಯಾಯಾಧೀಕರಣ ತರಬೇತಿಗಾಗಿ ಆಯ್ಕೆ ಮಾಡುವ ಕುರಿತು.

**ಉಲ್ಲೇಖ:**1) ಸರ್ಕಾರದ ಆದೇಶದ ಸಂಖ್ಯೆ: ಎಸ್‌ಡಬ್ಲ್ಯೂಎಲ್–68:ಎಸ್‌ಡಬ್ಲ್ಯೂ89: ಬೆಂಗಳೂರು ದಿನಾಂಕ: 02.11.1990ರ ಪ್ರಕಾರ.

2) ಸರ್ಕಾರಿ ಆದೇಶ ಸಂಖ್ಯೆ: ಸಕಿ:349:ಪಕವಿ:2005, ಬೆಂಗಳೂರು, ದಿನಾಂಕ:28.01.2006.

ಕರ್ನಾಟಕ ಸರ್ಕಾರದ ಆದೇಶದ ಪ್ರಕಾರ 2010–11ನೇ ಸಾಲಿಗೆ ಪರಿಶಿಷ್ಟ ಜಾತಿಯ ಕಾನೂನು ಪದವೀಧರರಿಗೆ ಆಡಳಿತ ನ್ಯಾಯಾಧೀಕರಣ ತರಬೇತಿ ನೀಡುವ ಕಾರ್ಯಕ್ರಮವಿರುತ್ತದೆ. ಆದಕಾರಣ ಅರ್ಹ ಪರಿಶಿಷ್ಟ ಜಾತಿಯ ಕಾನೂನು ಪದವೀಧರರು ದಿನಾಂಕ:23.07.2010 ರೊಳಗಾಗಿ ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿಗಳು, ರಾಯಚೂರು ರವರ ಕಾರ್ಯಾಲಯಕ್ಕೆ ಈ ಕೆಳಗೆ ಕಾಣಿಸಿದ ದಾಖಲೆಗಳೊಂದಿಗೆ ನಿಗದಿತ ನಮೂನೆಯಲ್ಲಿ ಅರ್ಜಿ ಸಲ್ಲಿಸಲು ತಿಳಿಸಲಾಗಿದೆ. ಅರ್ಜಿಯ ನಮೂನೆಯನ್ನು ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿಗಳು ರಾಯಚೂರು ರವರ ಕಛೇರಿಯ ವೇಳೆಯಲ್ಲಿ ಉಚಿತವಾಗಿ ಪಡೆಯಬಹುದು. ಹೆಚ್ಚಿನ ಮಾಹಿತಿಗಾಗಿ ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿಗಳು ರಾಯಚೂರು ರವರ ಕಛೇರಿಯಲ್ಲಿ ಸಂಪರ್ಕಿಸಿ ವಿವರಗಳನ್ನು ಪಡೆಯತಕ್ಕದ್ದು.

1) ಅರ್ಜಿದಾರರು ಪರಿಶಿಷ್ಟ ಜಾತಿಯವರಾಗಿರಬೇಕು.

2) ಅರ್ಜಿಯ ಜೊತೆಗೆ ತಹಶೀಲ್ದಾರರಿಂದ ಪಡೆದ ಜಾತಿ ಪ್ರಮಾಣ ಪತ್ರದ ದೃಢೀಕೃತ ಜೆರಾಕ್ಸ್ ಪ್ರತಿ ಲಗತ್ತಿಸಬೇಕು.

3) ಅರ್ಜಿಯ ಜೊತೆಗೆ ತಹಶೀಲ್ದಾರರಿಂದ ಪಡೆದ ಆದಾಯ ಪ್ರಮಾಣ ಪತ್ರದ ದೃಢೀಕರಣ ಜೆರಾಕ್ಸ್ ಪ್ರತಿ ಲಗತ್ತಿಸಬೇಕು.

4) ಕಾನೂನು ತರಬೇತಿಯು ರಾಯಚೂರು ಜಿಲ್ಲೆಗೆ ಮಾತ್ರ ಸೀಮಿತವಾಗಿದ್ದು, ತರಬೇತಿಯನ್ನು ರಾಯಚೂರು ಜಿಲ್ಲೆಯಲ್ಲಿ ಕೊಡಲಾಗುವುದು.

5) ತರಬೇತಿಯ ಅವಧಿಯು ನಾಲ್ಕು ವರ್ಷವಿದ್ದು ಈ ಅವಧಿಯಲ್ಲಿ ಪ್ರತಿ ತಿಂಗಳಿಗೆ ರೂ.1000/– ರಂತೆ ಶಿಷ್ಯ ವೇತನ ಕೊಡಲಾಗುವುದು. ತರಬೇತಿಯನ್ನು ಮಧ್ಯದಲ್ಲಿ ಬಿಟ್ಟ ಪಕ್ಷದಲ್ಲಿ ಅಲ್ಲಿಯವರೆಗೆ ಪಾವತಿಸಿದ ಶಿಷ್ಯವೇತನವನ್ನು ಭೂಕಂದಾಯ ರೂಪದಲ್ಲಿ ಕಾನೂನಿನ ಪ್ರಕಾರ ವಸೂಲಿ ಮಾಡಿ ಸರ್ಕಾರಕ್ಕೆ ವಾಪಸ್ಸು ಕಟ್ಟಬೇಕಾಗಿರುತ್ತದೆ.

6) ಅರ್ಜಿಗಳನ್ನು ದಿನಾಂಕ:23.07.2010ರೊಳಗಾಗಿ ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿಗಳು ರಾಯಚೂರು ರವರಿಗೆ ಸಲ್ಲಿಸತಕ್ಕದ್ದು.

7) ಜೂನ್–2010ಕ್ಕೆ ತರಬೇತಿ ಅರ್ಜಿದಾರರ ವಯಸ್ಸು 35ಕ್ಕೆ ಮೀರಿರಬಾರದು.

8) ದಿನಾಂಕ:ಜೂನ್–2010ರ ಒಳಗಾಗಿ 2 ವರ್ಷದೊಳಗೆ ಕಾನೂನು ಪದವಿಯನ್ನು ಪಾಸಾದ ಅಭ್ಯರ್ಥಿಗಳು ಮಾತ್ರ ಅರ್ಜಿಗಳನ್ನು ಹಾಕತಕ್ಕದ್ದು ಕಾನೂನು ಪದವಿಯಲ್ಲಿ ಪಾಸಾದ ಅಭ್ಯರ್ಥಿಗಳು ಎಲ್ಲಾ ಮೂಲ ದಾಖಲೆಯ ನಕಲು ಪ್ರತಿಗಳಿಗೆ ಗೆಜೆಟೆಡ್ ಅಧಿಕಾರಿಗಳಿಂದ ದೃಢೀಕರಿಸಿ ಅರ್ಜಿಯೊಂದಿಗೆ ಲಗತ್ತಿಸತಕ್ಕದ್ದು.

9) ತರಬೇತಿಗೆ ಅಭ್ಯರ್ಥಿಗಳನ್ನು ಜಿಲ್ಲಾ ಮಟ್ಟದ ಆಯ್ಕೆ ಸಮಿತಿಯಲ್ಲಿ ಸಂದರ್ಶನ ಮುಖಾಂತರ ಆಯ್ಕೆ ಮಾಡಲಾಗುತ್ತಿದೆ.

ಅಪೂರ್ಣ ಹಾಗೂ ಅವಧಿ ಮೀರಿ ಬಂದ ಅರ್ಜಿಗಳನ್ನು ಗಣನೆಗೆ ತೆಗೆದುಕೊಳ್ಳುವುದಿಲ್ಲ.

ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿಗಳು,
ರಾಯಚೂರು.

**ಅನುಬಂಧ–11ರ ಸರ್ಕಾರಿ ಆದೇಶ ಸಂಖ್ಯೆ: ಎಸ್‌ಡಬ್ಲ್ಯೂಎಲ್–68:ಎಸ್ಇಡಬ್ಲ್ಯೂ:89:ದಿನಾಂಕ:02.11.1990 ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗಕ್ಕೆ ಸೇರಿದ ಕಾನೂನು ಪದವೀಧರರಿಗೆ ಆಡಳಿತದಲ್ಲಿ ನ್ಯಾಯಾಧೀಕರಣ ತರಬೇತಿ ನೀಡುವ ಬಗ್ಗೆ.**

ಕಾರ್ಯದರ್ಶಿಗಳು,
ಜಿಲ್ಲಾ ಮಟ್ಟದಲ್ಲಿ ಕಾನೂನು ಪದವೀಧರರನ್ನು
ಆಡಳಿತ ನ್ಯಾಯಾಧೀಕರಣದಲ್ಲಿ ಆಯ್ಕೆಮಾಡುವ
ಆಯ್ಕೆ ಸಮಿತಿ, ರಾಯಚೂರು.

ಭಾವ ಚಿತ್ರ ಲಗತ್ತಿಸಬೇಕು

---

ಮಾನ್ಯರೆ

ನಿಮ್ಮ ಪತ್ರಿಕಾ ಪ್ರಕಟಣೆ ಜಾಹೀರಾತು____________________

ಕರ್ನಾಟಕ ಗೆಜೆಟ್ ದಿನಾಂಕ_____________ರ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗಕ್ಕೆ ಸೇರಿದ ಕಾನೂನು ಪದವೀಧರರಿಗೆ ಆಡಳಿತ ನ್ಯಾಯಾಧೀಕರಣದಲ್ಲಿ ತರಬೇತಿ ನೀಡುವ ಅರ್ಜಿ ಆಹ್ವಾನಿಸಿದಂತೆ ನಾನು ಸದರಿ ತರಬೇತಿಯನ್ನು ಪಡೆಯಲು ಅರ್ಜಿಯನ್ನು ದ್ವಿಪ್ರತಿಯಲ್ಲಿ ಈ ಕೆಳಕಂಡಂತೆ ಮಾಹಿತಿಯನ್ನು ಸಲ್ಲಿಸುತ್ತೇನೆ. ಹಾಗೂ ಸಲ್ಲಿಸಿರುವ ಮಾಹಿತಿಯು ಸತ್ಯವೆಂದು ದೃಢೀಕರಿಸುತ್ತೇನೆ.

ಸ್ಥಳ: ತಮ್ಮ ನಂಬುಗೆಯ
ದಿನಾಂಕ: ಅರ್ಜಿದಾರರ ಸಹಿ

**ಅರ್ಜಿ ನಮೂನೆ**

| | | |
|---|---|---|
| 1) | ಅಭ್ಯರ್ಥಿಯ ಹೆಸರು (ಬಿಡಿ ಅಕ್ಷರದಲ್ಲಿ) | : |
| 2) | ವಿಳಾಸ (ಬಿಡಿ ಅಕ್ಷರದಲ್ಲಿ) | : |
| 3) | ತಂದೆ: ಪೋಷಕರ:ಹೆಸರು ವಿಳಾಸ ಮತ್ತು ವೃತ್ತಿ | : |

| | | |
|---|---|---|
| 4) | ಹುಟ್ಟಿದ ದಿನಾಂಕ (ಎಸ್.ಎಸ್.ಎಲ್.ಸಿ. ಅಂಕಪಟ್ಟಿಯನ್ನು ದೃಢೀಕರಿಸಿ ಲಗತ್ತಿಸಬೇಕು) | : |
| 5) | ಎ) ಹುಟ್ಟಿದ ಸ್ಥಳ, ಜಿಲ್ಲೆ ಮತ್ತು ರಾಜ್ಯ<br>ಬಿ) ಈಗ ವಾಸಿಸುತ್ತಿರುವ ಜಿಲ್ಲೆ ಮತ್ತು ರಾಜ್ಯದ ಹೆಸರು | :<br>: |
| 6) | ಎ) ನೀವು ಪರಿಶಿಷ್ಟ ಜಾತಿ: ಪರಿಶಿಷ್ಟ ವರ್ಗದ ಇತರೆ ಹಿಂದುಳಿದ ವರ್ಗಕ್ಕೆ ಸೇರಿದಲ್ಲಿ ಜಾತಿ ಬಗ್ಗೆ ನಮೂದಿಸುವುದು<br>ಬಿ) ಮೇಲೆ ತಿಳಿಸಿದ ವಿಷಯದಲ್ಲಿ ಹೌದು ಅಂದಿದ್ದಲ್ಲಿ ಸಂಕ್ಷಮಪ್ರಾಧಿಕಾರಿಗಳಿಂದ ಅಂಗೀಕೃತ ಜಾತಿ ಪ್ರಮಾಣ ಪತ್ರವನ್ನು ದೃಢೀಕರಿಸಿ ಲಗತ್ತಿಸಬೇಕು. | :<br>: |
| ಬಿ–2 | ಆದಾಯ ಪ್ರಮಾಣ ಪತ್ರ ಲಗತ್ತಿಸಿದಲ್ಲಿ ಈ ಕೆಳಕಂಡ ವಿವರಗಳನ್ನು ಸಲ್ಲಿಸುವುದು<br>1) ಅರ್ಜಿದಾರರ ಆದಾಯ<br>2) ವೃತ್ತಿಯಿಂದ ಬಂದಂತಹ ಆದಾಯ ಅಥವಾ ವೇತನ<br>3) ಇನ್ನಿತರ ವೇತನ | :<br>:<br>: |
| ಬಿ–3 | ತಂದೆ: ತಾಯಿಗಳ ಆದಾಯ<br>1) ಉದ್ಯೋಗ ಅಥವಾ ನಿವೃತ್ತಿ ವೇತನದಿಂದ ಬಂದಂತಹ ಆದಾಯ<br>2) ಜಮೀನು ಅಥವಾ ಕಟ್ಟಡಗಳಿಂದ ಬಂದಂತಹ ಆದಾಯ<br>3) ಇನ್ನಿತರೆ ವೇತನದಿಂದ ಬಂದಂತಹ ಆದಾಯ | :<br>:<br>: |
| 6–3 | ಗಂಡ: ಹೆಂಡತಿಯ ಆದಾಯ<br>1) ವೃತ್ತಿ ಮತ್ತು ವೇತನದಿಂದ ಬಂದಂತಹ ಆದಾಯ<br>2) ಇನ್ನಿತರೆ ಆದಾಯ | :<br>: |
| 7) | ಅ) ಗಂಡು: ಹೆಣ್ಣು<br>ಆ) ಮದುವೆಯಾಗಿದೆಯೇ? ಇಲ್ಲವೇ?<br>ಇ) ಮದುವೆಯಾಗಿದ್ದಲ್ಲಿ ಒಂದಕ್ಕಿಂತ ಹೆಚ್ಚು ನಿಮಗೆ ಪತ್ನಿಯರಿದ್ದಾರೆಯೇ?<br>ಈ) ಈಗಾಗಲೇ ಪತ್ನಿಯನ್ನು ಹೊಂದಿದ್ದು, ಇನ್ನೊಬ್ಬರನ್ನು ಮದುವೆಯಾಗಿದ್ದಿರ? | :<br>:<br>:<br>: |
| 1) | ಕಾಲಂರಲ್ಲಿಯ ಮಾಹಿತಿಯ ದೃಢೀಕರಣವಾಗಿ ಎಸ್.ಎಸ್.ಎಲ್.ಸಿ. ಅಥವಾ ತತ್ಸಮಾನ ಪರೀಕ್ಷೆಯಲ್ಲಿ ಹುಟ್ಟಿದ ದಿನಾಂಕವನ್ನು ನಮೂದಿಸಿದ ಅಂಕಪಟ್ಟಿಯನ್ನು ಲಗತ್ತಿಸುವುದು. | |

| | | |
|---|---|---|
| 2) | ಕಾಲಂ ಸಂಖ್ಯೆ (8) (ಬಿ) ತಿಳಿಸಿರುವ ವಿದ್ಯಾರ್ಹತೆ ಬಗ್ಗೆ ಅಂಕಪಟ್ಟಿಯನ್ನು ದೃಢೀಕರಿಸಿ ಲಗತ್ತಿಸುವುದು. | : |
| 3) | ಕಾಲಂ ನಂ.–8(ಸಿ) ಯಲ್ಲಿ ತಿಳಿಸಿರುವಂತೆ ಹೆಚ್ಚಿನ ವಿದ್ಯಾರ್ಹತೆಯ ಬಗ್ಗೆ ಪ್ರಮಾಣ ಪತ್ರಗಳನ್ನು ದೃಢೀಕರಿಸಿ ಲಗತ್ತಿಸಬೇಕು. | : |
| 4) | ಕಾಲಂ ಸಂಖ್ಯೆ–10ರಲ್ಲಿ ತಿಳಿಸಿರುವಂತೆ ಸೇವೆಯ ಅವಧಿಯ ಬಗ್ಗೆ ದೃಢೀಕರಣ ಪ್ರಮಾಣ ಪತ್ರವನ್ನು ಲಗತ್ತಿಸುವುದು. | : |

ನಾನು ಈ ಮೇಲೆ ಒದಗಿಸಿರುವ ಮಾಹಿತಿಯನ್ನು ಸತ್ಯವೆಂದು ದೃಢೀಕರಿಸುತ್ತೇನೆ. ನಾನು ಈ ನಾಲ್ಕು ವರ್ಷಗಳ ತರಬೇತಿಯನ್ನು ಪೂರ್ಣಗೊಳಿಸುತ್ತೇನೆಂದು ತಿಳಿಸುತ್ತೇನೆ.

ಸ್ಥಳ:

ದಿನಾಂಕ: ಅಭ್ಯರ್ಥಿಯ ಸಹಿ

ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿಗಳು,

ಪಿ.ಆರ್.1084 ರಾಯಚೂರು.

**ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿಗಳ ಕಾರ್ಯಾಲಯ, ಉತ್ತರ ಕನ್ನಡ, ಕಾರವಾರ**

**ಪತ್ರಿಕಾ ಪ್ರಕಟಣೆ**

**ನಂ.ಜಿಸಕ:ಕಾ.ತ.ಬೇ:ಪ್ರಕಟಣೆ:ಸಿಆರ್9:2010–11, ದಿನಾಂಕ:13ನೇ ಜುಲೈ, 2010**

**ವಿಷಯ:** 2010–11ನೇ ಸಾಲಿನ ಪರಿಶಿಷ್ಟ ಜಾತಿ/ ಪರಿಶಿಷ್ಟ ವರ್ಗದ ಕಾನೂನು ಪದವೀಧರರಿಗೆ ತರಬೇತಿ ಮತ್ತು ಧನ ಸಹಾಯ ನೀಡುವ ಬಗ್ಗೆ.

2010–11ನೇ ಸಾಲಿಗೆ ಪರಿಶಿಷ್ಟ ಜಾತಿ/ ಪರಿಶಿಷ್ಟ ವರ್ಗದ ನಿರುದ್ಯೋಗಿ ಕಾನೂನು ಪದವೀಧರರಿಗೆ ಸ್ವತಂತ್ರವಾಗಿ ವಕೀಲ ವೃತ್ತಿ ಪ್ರಾರಂಭಿಸಲು ಸಹಾಯವಾಗುವಂತೆ ಪ್ರತಿಯೊಬ್ಬ ಕಾನೂನು ಪದವೀಧರರಿಗೆ 4 ವರ್ಷಗಳ ತರಬೇತಿ ಮತ್ತು ಬಾರ್ ಕೌನ್ಸಿಲ್‌ನಲ್ಲಿ ಹೆಸರು ನೊಂದಾಯಿಸಲು ಹಾಗೂ ಕಾನೂನು ಗ್ರಂಥಗಳನ್ನು ಖರೀದಿಸಲು ರೂ.5000–00 ಮೀರದಂತೆ ಧನ ಸಹಾಯ ನೀಡಲಾಗುತ್ತದೆ. ಧನ ಸಹಾಯ ಪಡೆಯುವ ಪರಿಶಿಷ್ಟ ಜಾತಿ/ ಪರಿಶಿಷ್ಟ ವರ್ಗದ ನಿರುದ್ಯೋಗಿ ಕಾನೂನು ಪದವೀಧರರಿಗೆ ವಾರ್ಷಿಕ ವರಮಾನ ರೂ.18000–00 ಮೀರದಂತೆ ಇರುವ ಅಭ್ಯರ್ಥಿಗಳು ಸದರ ಸೌಲಭ್ಯಕ್ಕೆ ಅರ್ಹರಿರುತ್ತಾರೆ. ಆದ್ದರಿಂದ ತರಬೇತಿ ಪಡೆಯಲಿಚ್ಛಿಸುವ ಅರ್ಹ ಅಭ್ಯರ್ಥಿಗಳು ತಮ್ಮ ಅರ್ಜಿಗಳನ್ನು ದಿನಾಂಕ: 16.08.2010ರೊಳಗಾಗಿ ಸಂಬಂಧಪಟ್ಟ ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿಗಳ ಕಾರ್ಯಾಲಯ, ಕಾರವಾರ ಇಲ್ಲಿಗೆ ಅರ್ಜಿ ಸಲ್ಲಿಸುವುದು. ಅರ್ಜಿ ನಮೂನೆ ಹಾಗೂ ಹೆಚ್ಚಿನ ಮಾಹಿತಿಗಾಗಿ ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿಗಳವರ ಕಛೇರಿ ಕಾರವಾರ/ ಸಂಬಂಧಪಟ್ಟ ತಾಲ್ಲೂಕಿನ ತಾಲ್ಲೂಕು ಸಮಾಜ ಕಲ್ಯಾಣ ಅಧಿಕಾರಿಯವರಿಗೆ ಸಂಪರ್ಕಿಸಬಹುದು.

1) ಅರ್ಜಿದಾರರ ಗರಿಷ್ಟ ವಯೋಮಿತಿಯು ಅರ್ಜಿ ಸ್ವೀಕರಿಸಿದ ಕೊನೆಯ ದಿನಾಂಕದಂದು 35 ವರ್ಷ ಮೀರಿರಬಾರದು.

2) ಆಯ್ಕೆಯಾದ ಅಭ್ಯರ್ಥಿಗೆ ಡಿಸ್ಟ್ರಿಕ್ ಪಬ್ಲಿಕ್ ಪ್ರಾಸಿಕ್ಯೂಟರ್ ಗವರ್ನಮೆಂಟ್ ಅಡ್ವೋಕೇಟ್ ಅಥವಾ 20 ವರ್ಷಕ್ಕಿಂತ ಹೆಚ್ಚಿಗೆ ವಕೀಲ ವೃತ್ತಿ ನಡೆಸುತ್ತಿರುವ ವಕೀಲರ ಮುಖಾಂತರ ತರಬೇತಿ ನೀಡಲಾಗುವುದು.

3) ತರಬೇತಿಗಾಗಿ ಆಯ್ಕೆ ಮಾಡಿಕೊಳ್ಳಬೇಕಾದ ಅಭ್ಯರ್ಥಿಯು ಅರ್ಜಿ ಸ್ವೀಕರಿಸಲು ನಿಗದಿಪಡಿಸಿದ ತಾರೀಖಿನ ಹಿಂದೆ 2 ವರ್ಷಗಳ ವಕೀಲ ಪದವಿ ಪಡೆದು ಸನತ್ ಪಡೆದಿರಬೇಕು.

4) ಅರ್ಜಿ ಸಲ್ಲಿಸುವಾಗ ಎಲ್ಲಾ ದಾಖಲಾತಿ ಪತ್ರಗಳನ್ನು ದೃಢೀಕರಿಸಿ ಸಲ್ಲಿಸುವುದು.

ಜಿಲ್ಲಾ ಸಮಾಜ ಕಲ್ಯಾಣ

ಪಿ.ಆರ್.1105 ಅಧಿಕಾರಿಗಳು,

ಉತ್ತರಕನ್ನಡ, ಕಾರವಾರ.

**ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್ ದಕ್ಷಿಣಕನ್ನಡ ಜಿಲ್ಲೆ, ಮಂಗಳೂರು, ಇವರ ನ್ಯಾಯಾಲಯದಲ್ಲಿ**

**ನಂ: ಎಸ್‌ಡಿಕೆ/1/ಡಿಟಿಸಿಆರ್/1998–99, ದಿನಾಂಕ:29ನೇ ಜೂನ್, 2010**

**ಉಪಸ್ಥಿತರು:** ನೂರ್ ಮಹಮ್ಮದ್ ಹುಸೇನ್

ಅಧಿಕೃತ ಅಧಿಕಾರಿ ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

**ಫಿರ್ಯಾದುದಾರರು:**
ಅಬಕಾರಿ ನಿರೀಕ್ಷಕರು(2)
ಇ.ಐ.ಬಿ. ಮಂಗಳೂರು
ಮಂಗಳೂರು.

**ಎದುರುದಾರರು:**
ಶ್ರೀ ಡಿ.ಎಸ್.ಧರ್ಮಪ್ಪ
ಬಿನ್ ಶಾಂತಮಲ್ಲಪ್ಪ, ಕಾಫಿ ಪ್ಲಾಂಟರ್ಸ್
ಕೊಲಗೇರಿ ಎಸ್ಟೇಟ್, ದೋಣಿಗಲ್ ಅಂಚೆ,
ಸಕಲೇಶಪುರ, ಹಾಸನ ಜಿಲ್ಲೆ
(ವಾಹನದ ಮಾಲೀಕರು)
ಮತ್ತು ಇತರೆ ಒಬ್ಬ ಆರೋಪಿ.

**ಪ್ರಕರಣದ ಮುಖ್ಯಾಂಶಗಳು:**

ಅಬಕಾರಿ ನಿರೀಕ್ಷಕರು(2), ಇ.ಐ.ಬಿ. ಮಂಗಳೂರುರವರು ದಿ:4–7–1998 ರಂದು ಮುಂಜಾನೆ 3:30 ಗಂಟೆ ಸಮಯದಲ್ಲಿ ತಮ್ಮ ಸಿಬ್ಬಂದಿಗಳೊಂದಿಗೆ ರಾ.ಹೆ.48ರಲ್ಲಿ ಪಡೀಲ್ ಕ್ರಾಸಿನ ಬಳಿ ರಸ್ತೆಗಾವಲು ನಡೆಸಿ ವಾಹನ ತಪಾಸಣೆ ನಡೆಸುತ್ತಿರುವ ಸಂದರ್ಭದಲ್ಲಿ ಬಿ.ಸಿ.ರೋಡ್ ಕಡೆಯಿಂದ ಮಂಗಳೂರು ಕಡೆಗೆ ಬರುತ್ತಿದ್ದ ಕೆಎ–21–167 ನೋಂದಣಿ ಸಂಖ್ಯೆ ಇರುವ ಈಚರ್ ಕ್ಯಾಂಟರ್ ಲಾರಿಯನ್ನು ನಿಲ್ಲಿಸಲು ಸೂಚನೆ ನೀಡಿದಾಗ ಚಾಲಕನು ಲಾರಿಯನ್ನು ನಿಲ್ಲಿಸದೇ ಮುಂದಕ್ಕೆ ಸಾಗಿದಾಗ ಅನುಮಾನಗೊಂಡು ಹಿಂಬಾಲಿಸಿ ಪಂಪ್‌ವೆಲ್ ವೃತ್ತದ ಬಳಿ ತಡೆದು ನಿಲ್ಲಿಸಿ, ಚಾಲಕನನ್ನು ಲಾರಿಯಲ್ಲಿರುವ ಸರಕಿನ ಬಗ್ಗೆ ವಿಚಾರಿಸಲಾಗಿ ಸಮರ್ಪಕವಾದ ಉತ್ತರ ನೀಡದ ಹಿನ್ನಲೆಯಲ್ಲಿ ಅನುಮಾನ ಬಲಗೊಂಡು ವಾಹನವನ್ನು ಪರಿಶೀಲಿಸಿದಾಗ ಒಟ್ಟು 1393.200 ಲೀಟರ್ ಮದ್ಯವನ್ನು ಯಾವುದೇ ಪರವಾನಿಗೆ ಇಲ್ಲದೇ ಹೊಂದಿ ಸಾಗಾಟ ಮಾಡುತ್ತಿರುವುದನ್ನು ಪತ್ತೆಹಚ್ಚಿ, ಆರೋಪಿಗಳಾದ (1) ಕುಮಾರ್, ಬಿನ್ ಈಶ್ವರ ಗೌಡ, ಮಲ್ಲಸಂದ್ರ, ಅರೇಹಳ್ಳಿ, ಹೋಬಳಿ, ಹಾಸನ ಜಿಲ್ಲೆ (ವಾಹನದ ಚಾಲಕ) ಹಾಗೂ ವಾಹನದಲ್ಲಿ ದೊರೆತ ದಾಖಲೆ ಪತ್ರಗಳ ಆಧಾರದಲ್ಲಿ (2) ಡಿಸ್ಟಿಲರಿ ಮಾಲೀಕರು, ಮೆ: ಕರ್ನಾಟಕ ಬ್ರೆವರೀಸ್ ಎಂಡ್ ಡಿಸ್ಟಿಲರೀಸ್ ಪ್ರೈ ಲಿ., 20ನೇ ಮೈಲಿ ಕಲ್ಲು, ತುಮಕೂರು ರಸ್ತೆ, ನೆಲಮಂಗಲ, ಬೆಂಗಳೂರು (3) ಡಿಸ್ಟಿಲರಿ ಮಾಲೀಕರು, ಮೆ: ಕರ್ನಾಟಕ ಬ್ರೆವರೀಸ್ ಎಂಡ್ ಡಿಸ್ಟಿಲರೀಸ್ ಪ್ರೈ ಲಿ., 9ನೇ ಮೈಲಿ ಕಲ್ಲು, ತುಮಕೂರು ರಸ್ತೆ, ಬೆಂಗಳೂರು ಹಾಗೂ (4)ವಾಹನದ ಮಾಲೀಕರಾದ ಶ್ರೀ ಡಿ.ಎಸ್. ಧರ್ಮಪ್ಪ, ಬಿನ್:ಶಾಂತಮಲ್ಲಪ್ಪ, ಕಾಫಿ ಪ್ಲಾಂಟರ್ಸ್, ಕೊಲಗೇರಿ ಎಸ್ಟೇಟ್, ದೋಣಿಗಲ್ ಅಂಚೆ, ಸಕಲೇಶಪುರ, ಹಾಸನ ಜಿಲ್ಲೆ ಇವರ ವಿರುದ್ಧ ಪ್ರಥಮ ಮಾಹಿತಿ ಸಂಖ್ಯೆ 1/98–99, ದಿ: 4–07–1998 ರಲ್ಲಿ ಮೊಕದ್ದಮೆಯನ್ನು ದಾಖಲು ಮಾಡಿ, ಪ್ರ.ವ.ವರದಿಯನ್ನು ಮಾನ್ಯ ನ್ಯಾಯಾಲಯಕ್ಕೆ ಸಲ್ಲಿಸಿ ನಕಲನ್ನು ಸೊತ್ತುಪಟ್ಟಿಯೊಂದಿಗೆ ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು, ದ.ಕ.ಜಿಲ್ಲೆ, ಮಂಗಳೂರು ಇವರಿಗೆ ಸಲ್ಲಿಸಿ ವಶಪಡಿಸಿಕೊಂಡ ಸೊತ್ತುಗಳನ್ನು ಹಾಗೂ ವಾಹನ ವನ್ನು ಮುಂದಿನ ತನಿಖೆಗಾಗಿ ಅಂದಿನ ಕಂಕನಾಡಿ ವಲಯ ಅಬಕಾರಿ ನಿರೀಕ್ಷಕರಿಗೆ ಹಸ್ತಾಂತರಿಸುವ ಬಗ್ಗೆ ಆದೇಶಕ್ಕಾಗಿ ಕೋರಿರುತ್ತಾರೆ. ಅದರಂತೆ ಅನುಮತಿಯನ್ನು ನೀಡಲಾಗಿರುತ್ತದೆ.

**ಜಪ್ತುಪಡಿಸಿಕೊಳ್ಳಲಾದ ಸೊತ್ತುಗಳು:**

1) ಒಂದು ನೀಲಿ ಬಣ್ಣದ ಈಚರ್ ಕ್ಯಾಂಟರ್ ಲಾರಿ ನಂ:KA-21-167
2) ಪ್ರತಿ ಪೆಟ್ಟಿಗೆಯಲ್ಲಿ ತಲಾ 180 ಮಿಲಿಯ 48 ಬಾಟ್ಲಿಗಳಿರುವ 100 ಪೆಟ್ಟಿಗೆಗಳಲ್ಲಿ 864 ಲೀ. ಬ್ಯಾಗ್‌ಪೈಪರ್ ವಿಸ್ಕಿ
3) ಪ್ರತಿ ಪೆಟ್ಟಿಗೆಯಲ್ಲಿ ತಲಾ 750 ಮಿಲಿಯ 12 ಬಾಟ್ಲಿಗಳಿರುವ 10ಪೆಟ್ಟಿಗೆಗಳಲ್ಲಿ 90 ಲೀ. ವಿನ್ ವಿಸ್ಕಿ
4) ಪ್ರತಿ ಪೆಟ್ಟಿಗೆಯಲ್ಲಿ ತಲಾ 375 ಮಿಲಿಯ 24 ಬಾಟ್ಲಿಗಳಿರುವ 20 ಪೆಟ್ಟಿಗೆಗಳಲ್ಲಿ 180 ಲೀ. ವಿನ್ ವಿಸ್ಕಿ
5) ಪ್ರತಿ ಪೆಟ್ಟಿಗೆಯಲ್ಲಿ ತಲಾ 180 ಮಿಲಿಯ 48 ಬಾಟ್ಲಿಗಳಿರುವ 30 ಪೆಟ್ಟಿಗೆಗಳಲ್ಲಿ 259 ಲೀ. ವಿನ್ ವಿಸ್ಕಿ

(ಮೇಲಿನ ಮದ್ಯದ ಪೈಕಿ ಬ್ಯಾಗ್ ಪೈಪರ್ ವಿಸ್ಕಿಯಿಂದ 180 ಎಂ ಎಲ್ ನ 4 ಬಾಟಲಿಗಳು, ವಿನ್ ವಿಸ್ಕಿಯಿಂದ 750 ಎಂ ಎಲ್ ನ 3 ಬಾಟಲಿಗಳು, 375 ಎಂಎಲ್ ನ 6 ಬಾಟಲಿಗಳು, 180 ಎಂ ಎಲ್ ನ 3 ಬಾಟಲಿಗಳು ಒಟ್ಟು 16 ಮದ್ಯದ ಬಾಟಲಿಗಳನ್ನು ರಾಸಾಯನಿಕ ಪರೀಕ್ಷೆಗಾಗಿ ಮಾದರಿ ತೆಗೆಯಲಾಗಿದೆ)

6) ಸ್ಟೆಪಿನಿ ಟೈರ್,ಜಾಕ್‌ಲಿವರ್, ಸ್ಪಾನರ್ ಸೆಟ್, ವೀಲ್ ಸೆಟ್ಸ್, ಸುತ್ತಿಗೆ ಹಾಗೂ 3 ಟಾರ್ಪಾಲ್‌ಗಳು ಮತ್ತು ಹಗ್ಗ

7) ಆರ್.ಸಿ ಪುಸ್ತಕ ನಂ:36455

8) ಮೋಟಾರ್ ಡ್ರೈವಿಂಗ್ ಲೈಸನ್ಸ್ ನಂ:534775 ರ ಜೆರಾಕ್ಸ್ ಪ್ರತಿ.

ಮೇಲ್ಕಂಡ ವಾಹನ ಸಂ: KA-21-167 ಈಚರ್ ಕ್ಯಾಂಟರ್ ಇದರ ಮಾಲೀಕರು ದಿ:10–7–1998ರಂದು ವಾಹನದ ಮದ್ಯಂತರ ಬಿಡುಗಡೆಗೆ ಸಲ್ಲಿಸಿದ್ದ ಅರ್ಜಿಯನ್ನು ಪರಿಗಣಿಸಿ ಅಂದಿನ ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು, ದ.ಕ ಜಿಲ್ಲೆ ಮಂಗಳೂರುರವರ ಪ್ರಾಧಿಕಾರದ ಆದೇಶ ಸಂ:ಎಸ್‌ಡಿಕೆ:ಡಿಟಿಸಿಆರ್:1:98–99 ದಿ:5–9–1998 ರಲ್ಲಿ ರೂ. 1,50,000/– ಮೊತ್ತದ ಬ್ಯಾಂಕ್ ಭದ್ರತೆಯನ್ನು ಪ್ರಾಧಿಕಾರಕ್ಕೆ ಒದಗಿಸುವ ಹಾಗೂ ಇತರೆ ಷರತ್ತುಗಳ ಮೇಲೆ ಮದ್ಯಂತರ ಬಿಡುಗಡೆ ಆದೇಶ ಹೊರಡಿಸಲಾಗಿದ್ದು,ಸದ್ರಿ ಮದ್ಯಂತರ ಆದೇಶದ ವಿರುದ್ದ ವಾಹನದ ಮಾಲೀಕರು ಮಾನ್ಯ ದ.ಕ ಜಿಲ್ಲಾ 3ನೇ ಹೆಚ್ಚುವರಿ ಸೆಷನ್ ಜಡ್ಜ್ ನ್ಯಾಯಾಲಯ ಮಂಗಳೂರು ಇದರ ಕ್ರಿಮಿನಲ್ ಅಪೀಲ್ ಸಂ:137/98ರಲ್ಲಿ ಮೇಲ್ಮನವಿ ಸಲ್ಲಿಸಿ ಮಾನ್ಯ ನ್ಯಾಯಾಲಯವು ಸದ್ರಿ ಮೇಲ್ಮನವಿಯ ವಿಚಾರಣೆ ನಡೆಸಿ ದಿನಾಂಕ 29–10–1998ರಂದು ಹೊರಡಿಸಿದ ತೀರ್ಪು ಆದೇಶದಲ್ಲಿ ಪ್ರಾಧಿಕಾರದ ಮಧ್ಯಂತರ ಆದೇಶದಲ್ಲಿ ವಿಧಿಸಿರುವ ಷರತ್ತುಗಳ ಪೈಕಿ ರೂ.150,000/– ಮೌಲ್ಯದ ಬ್ಯಾಂಕ್ ಗ್ಯಾರಂಟಿಯ ಬದಲಾಗಿ ರೂ. 1,50,000/– ಮೌಲ್ಯದ ಇಂಡೆಮ್ನಿಟಿ ಬಾಂಡ್‌ನ್ನು ಪಡೆದುಕೊಂಡು ಹಾಗೂ ಇತರೇ ಷರತ್ತುಗಳ ಅನುಸಾರ ವಾಹನದ ಮಧ್ಯಂತರ ಬಿಡುಗಡೆಗೆ ಆದೇಶ ನೀಡಿರುತ್ತದೆ. ಸತ್ರ ನ್ಯಾಯಾಲಯದ ಮೇಲಿನ ಆದೇಶವನ್ನು ಗೌರವಿಸಿ, ಪ್ರಾಧಿಕಾರದಿಂದ ದಿನಾಂಕ 5–11–1998ರಲ್ಲಿ ಹೊರಡಿಸಿದ ಆದೇಶದಲ್ಲಿ ವಾಹನವನ್ನು ವಾಹನದ ಮಾಲಿಕರಿಗೆ ಮಧ್ಯಂತರ ಬಿಡುಗಡೆಗೊಳಿಸಿ ಆದೇಶಿಸಲಾಗಿರುತ್ತದೆ. ಆ ಪ್ರಕಾರ ವಾಹನದ ಮಾಲೀಕರು ರೂ.1,50,000/–ಮೌಲ್ಯದ ಇಂಡೆಮ್ನಿಟಿ ಬಾಂಡನ್ನು ಮತ್ತು ಶ್ರೀ.ಕೃಷ್ಣಸ್ವಾಮಿ, ಬಿನ್: ಹನುಮಂತಪ್ಪ, ಕೆಳಕೋಟೆ ಎಕ್ಸ್‌ಟೆನ್ಷನ್, ಚಿತ್ರದುರ್ಗ ಎಂಬವರನ್ನು ಶ್ಯೂರಿಟಿಯನ್ನಾಗಿ ಪ್ರಾಧಿಕಾರಕ್ಕೆ ಒದಗಿಸಿ, ವಾಹನವನ್ನು ತನ್ನ ಮಧ್ಯಂತರ ಸುಪರ್ಧಿಗೆ ಪಡೆದುಕೊಂಡಿರುತ್ತಾರೆ.

ಸದ್ರಿ ಪ್ರಕರಣದ ಮುಟ್ಟುಗೋಲು ನಡವಳಿಯನ್ನು ದಿ:12–7–2001ರಿಂದ ಪ್ರಾರಂಭಿಸಿ ಪ್ರಕರಣದ ತನಿಖಾಧಿಕಾರಿಯಾದ ಶ್ರೀ.ಯಶವಂತ ಕುಮಾರ್, ಅಬಕಾರಿ ನಿರೀಕ್ಷಕರು,ಉಳ್ಳಾಲ ವಲಯ,ಉಳ್ಳಾಲ ಇವರನ್ನು ಪಿಡಬ್ಲ್ಯೂ–1 ರನ್ನರಾಗಿ ದಿನಾಂಕ:13–12–2001ರಂದು, ಪ್ರಕರಣದ ಫಿರ್ಯಾದುದಾರರಾದ ಶ್ರೀ.ಕೆ.ಗುರುಮೂರ್ತಿ ಅಬಕಾರಿ ನಿರೀಕ್ಷಕರು ಇವರನ್ನು ಪಿಡಬ್ಲ್ಯೂ–2 ರನ್ನರಾಗಿ ದಿ:12–9–2002ರಂದು ಮತ್ತು ಪ್ರಕರಣದ ಮಾದರಿಗಳನ್ನು ರಾಸಾಯನಿಕ ವಿಶ್ಲೇಷಕರವರಿಗೆ ಒಪ್ಪಿಸಿರುವ ಶ್ರೀ.ಯು.ರಾಮ ಅಬಕಾರಿ ಮುಖ್ಯ ರಕ್ಷಕ ಇವರನ್ನು ಪಿಡಬ್ಲ್ಯೂ–3 ರನ್ನಾಗಿ ದಿ:17–10–2007ರಂದು ಅಭಿಯೋಗದ ಪರ ಸಾಕ್ಷಿ ವಿಚಾರಣೆ ನಡೆಸಲಾಗಿರುತ್ತದೆ. ಸಾಕ್ಷಿ ವಿಚಾರಣಾ ಸಂದರ್ಭದಲ್ಲಿ ವಾಹನದ ಮಾಲೀಕರು, ವಾಹನದ ಮಾಲೀಕರ ಪರ ಜಿ.ಪಿ.ಎ.ದಾರರು ಹಾಗೂ ವಾಹನದ ಮಾಲೀಕರ ರಕ್ಷಣಾ ವಕೀಲರಿಗೆ ಹಲವಾರು ಬಾರಿ ನೋಟಿಸುಗಳನ್ನು ನೀಡಿ ರಕ್ಷಣಾ ಸಾಕ್ಷಿ ವಿಚಾರಣೆಗೆ ಅವಕಾಶವನ್ನು ಕಲ್ಪಿಸಿದ್ದರೂ ಸದ್ರಿಯವರು ಪ್ರಾಧಿಕಾರದ ಮುಂದೆ ಹಾಜರಾಗದೇ ಇರುವುದರಿಂದ ರಕ್ಷಣಾ ಪರ ಹೇಳಿಕೆಗಳು ಇಲ್ಲವೆಂದು ತೀರ್ಮಾನಿಸಿ ಮುಟ್ಟುಗೋಲು ನಡವಳಿಯನ್ನು ಮುಕ್ತಾಯಗೊಳಿಸಿ ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು, ಇಐಬಿ,ದ.ಕ ಜಿಲ್ಲೆ, ಮಂಗಳೂರು ಇಲ್ಲಿ ಪ್ರಾಧಿಕಾರದ ಮುಟ್ಟುಗೋಲು ಅದೇಶ ಸಂ:ಎಸ್‌ಡಿಕೆ:1: ಡಿಟಿಸಿಆರ್: 1998–99 ದಿನಾಂಕ:24–10–2007ರಂತೆ ವಾಹನವನ್ನು ಮುಟ್ಟುಗೋಲು ಹಾಕಿಕೊಂಡು ಪ್ರಾಧಿಕಾರದ ಮದ್ಯಂತರ ಬಿಡುಗಡೆಗೆ ಆದೇಶವನ್ನು ರದ್ದುಗೊಳಿಸಿ, ವಾಹನವನ್ನು ತಕ್ಷಣ ಪ್ರಾಧಿಕಾರದ ವಶಕ್ಕೆ ಒಪ್ಪಿಸಲು ಆದೇಶಿಸಲಾಗಿರುತ್ತದೆ.

ಪ್ರಾಧಿಕಾರದ ಮುಟ್ಟುಗೋಲು ಅದೇಶದ ವಿರುದ್ದ ವಾಹನದ ಮಾಲೀಕರಾದ ಶ್ರೀ.ಡಿ.ಎಸ್. ಧರ್ಮಪ್ಪ, ಬಿನ್:ಶಾಂತ ಮಲ್ಲಪ್ಪ, ಕಾಫಿ ಪ್ಲಾಂಟರ್ಸ್, ಕೊಲಗೇರಿ ಎಸ್ಟೇಟ್, ದೋಣಿಗಲ್ ಅಂಚೆ, ಸಕಲೇಶಪುರ, ಹಾಸನ ಜಿಲ್ಲೆ ಇವರು ಮಾನ್ಯ 3ನೇ ಜಿಲ್ಲಾ ಹೆಚ್ಚುವರಿ ಸೆಷನ್ ಜಡ್ಜ್ ನ್ಯಾಯಾಲಯ, ದ.ಕ ಜಿಲ್ಲೆ ಮಂಗಳೂರು ಇಲ್ಲಿ ಕ್ರಿಮಿನಲ್ ಅಪೀಲ್ ಸಂ: 324/2007 ರಂತೆ ಮೇಲ್ಮನವಿ ಸಲ್ಲಿಸಿದ್ದು,ಮಾನ್ಯ ಸತ್ರ ನ್ಯಾಯಾಲಯವು ದಿ:18–2–2009ರಂದು ಆದೇಶ ಹೊರಡಿಸಿ ಈ ಕೆಳಕಂಡಂತೆ ತೀರ್ಪು ನೀಡಿರುತ್ತಾರೆ.

1) Crl.A.No:324/2007 is allowed.

2) The order of the learned respondent No:2 in SDK/DTCR/1/ 98-99, dated:24-10-2007 is hereby set aside.

3) The matter is remanded back to the learned respondent No:2 to dispose of the matter in accordance with law and interms of the observation made in the body of the judgment.
4) The respondent No:2 shall permit the prosecution to produce the certified copies of the documents relied on by the prosecution witnesses or attested copies from the investigating officer and thereafter, providing opportunity to the appellant to pass appropriate order in accordance with law.
5) Send back the records to the lower court.

ಮಾನ್ಯ 3ನೇ ಜಿಲ್ಲಾ ಹೆಚ್ಚುವರಿ ಸೆಷನ್ ಜಡ್ಜ್ ನ್ಯಾಯಾಲಯ, ದ.ಕ ಜಿಲ್ಲೆ, ಮಂಗಳೂರು ಇವರ ಕ್ರಿಮಿನಲ್ ಅಪೀಲ್ ಸಂ: 324/2007 ರ ದಿ:18–2–2009ರ ಅದೇಶದಂತೆ ಪ್ರಕರಣದಲ್ಲಿ ಕಕ್ಷಿದಾರರಿಗೆ ಅವಕಾಶ ಕೊಟ್ಟು ಹಾಗೂ ಅಭಿಯೋಗ ಸಾಕ್ಷಿದಾರರ ಪಾಟೀ ಸವಾಲಿಗೆ ಅವಕಾಶ ನೀಡುವ ಪ್ರಯುಕ್ತ ಪ್ರಕರಣದಲ್ಲಿ ಪಾಟೀ ಸವಾಲಿಗಾಗಿ ದಿನಾಂಕ:10–6–09, 12–8–09, 13–10–2009,15–12–2009,16–2–2010,27–4–2010 ಮತ್ತು 15–6–2010 ರಂದು ಮರು ವಿಚಾರಣಾ ದಿನಾಂಕ ನಿಗದಿ ಪಡಿಸಿ ಈ ಕೆಳಕಂಡಂತೆ ಪಾಟೀ ಸವಾಲು ಹಾಗೂ ವಾದ ವಿವಾದ ನಡೆಸಿ ಈ ಕೆಳಗಿನ ವಿವಾದಾಂಶಗಳನ್ನು ತೀರ್ಮಾನಿಸಬೇಕಾಗಿರುವುದು ಅಗತ್ಯವಾಗಿದ್ದು ಪರಿಶೀಲನಾ ಅಂಶಗಳು ಈ ಕೆಳಗಿನಂತಿರುತ್ತದೆ.

1. ದಿನಾಂಕ:04.07.1998ರಂದು KA-21-167 ಈಚರ್ ಕ್ಯಾಂಟರ್ ಲಾರಿಯಲ್ಲಿ ಯಾವುದೇ ರಹದಾರಿ ಪತ್ರವಿಲ್ಲದೆ ಅಕ್ರಮವಾಗಿ 1387.440 ಲೀ.ಭಾ.ತ. ಮದ್ಯವನ್ನು ಸಾಗಾಣಿಕೆ ಮಾಡಲಾಗಿದೆಯೇ?
2. ವಶಪಡಿಸಿಕೊಂಡಿರುವ ವಾಹನ ಮಾಲೀಕ ತಾನೆಂದು, ತನಗೆ ತಿಳಿಯದೇ ಅಕ್ರಮ ಮದ್ಯ ಸಾಗಾಣಿಕೆಗೆ ವಾಹನವನ್ನು ಉಪಯೋಗಿಸಲ್ಪಟ್ಟಿತ್ತು ಎಂಬುದನ್ನು ವಾಹನ ಮಾಲೀಕರು ಸಾಬೀತುಪಡಿಸಿದಾರೆಯೇ?
3. ಜಪ್ತು ಪಡಿಸಲಾಗಿರುವ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದೇ?

ಈ ಮೇಲಿನ ಪರಿಶೀಲನಾಂಶಗಳನ್ನು ಲಭ್ಯವಿರುವ ಸಾಕ್ಷ್ಯಾಧಾರಗಳ ಮೇಲೆ ಈ ಕೆಳಗಿನಂತೆ ಉತ್ತರಿಸಿರುತ್ತೇನೆ.

ಒಂದನೇ ಅಂಶವನ್ನು ಗುಣಾತ್ಮಕವಾಗಿ ಹೌದು ಎಂದು. ಎರಡನೇ ಅಂಶವನ್ನು ನಕರಾತ್ಮಕವಾಗಿ ಹಾಗೂ ಮೂರನೇ ಅಂಶವನ್ನು ಅಂತಿಮ ಆದೇಶದಂತೆ.

ಶ್ರೀ.ಯಶವಂತ ಕುಮಾರ್, ಅಬಕಾರಿ ನಿರೀಕ್ಷಕರು, ಉಳ್ಳಾಲ ವಲಯ ಪಿಡಬ್ಲ್ಯೂ–1 ಇವರನ್ನು ದಿನಾಂಕ:16–2–2010ರಂದು ರಕ್ಷಣಾ ಪರ ವಕೀಲರಾದ ಶ್ರೀ.ಸುಬ್ಬಯ್ಯ ರೈ ಇವರು ಸದ್ರಿಯವರ ದಿನಾಂಕ:13–12–2001ರ ಸಾಕ್ಷಿ ವಿಚಾರಣೆಯನ್ನು ಮುಂದುವರಿಸಿ ಪಾಟೀ ಸವಾಲು ನಡೆಸಿ ಸಾಕ್ಷಿದಾರರು ಪಾಟೀಸವಾಲಿಗೆ ಉತ್ತರಿಸುತ್ತಾ ಈ ಪ್ರಕರಣಕ್ಕೆ ಸಂಬಂಧಪಟ್ಟ ವಾಹನದ ಮಾಲೀಕರ ಹೇಳಿಕೆ ನಾನು ಪಡೆದುಕೊಂಡಿಲ್ಲ,ವಾಹನದಲ್ಲಿ ಆರ್.ಸಿ ದೊರೆತ ಕಾರಣ ಅವರನ್ನು ಅರೋಪಿಯಾಗಿ ವಿಚಾರಿಸಿರುತ್ತೇನೆ, ಬೇರೆ ದಾಖಲೆಗಳನ್ನು ಅವರು ನೇರವಾಗಿ ಪ್ರಕರಣದಲ್ಲಿ ಶಾಮೀಲಾದ ಬಗ್ಗೆ ನನಗೆ ದೊರೆತಿರುವುದಿಲ್ಲ, ನಾನು ಮುಖ್ಯ ವಿಚಾರಣೆಯಲ್ಲಿ ಹೇಳಿದಂತೆ ಮಾದರಿ ಬಾಟಲಿಗಳನ್ನು ರಾಸಾಯನಿಕ ವಿಶ್ಲೇಷಣೆಗೆ ಕಳುಹಿಸಿಲ್ಲ ಹಾಗೂ ಅವರಿಂದ ವರದಿ ಪಡೆದುಕೊಂಡಿಲ್ಲವೆಂದರೆ ಸರಿಯಲ್ಲ. ನಾನು ಸರಿಯಾಗಿ ತನಿಖೆ ಮಾಡದೇ ನ್ಯಾಯಾಲಯದಲ್ಲಿ ಸುಳ್ಳು ಅಪಾದನೆ ಪಟ್ಟಿ ಸಲ್ಲಿಸಿ ಅಪಾದನೆ ಮಾಡಿದ್ದೇನೆ ಎಂದರೆ ಸರಿಯಲ್ಲ, ತಕ್ಷೀರಿಗೂ, ವಾಹನ ಮಾಲೀಕರಿಗೂ ಯಾವುದೇ ಸಂಬಂಧವಿಲ್ಲವೆಂದರೆ ಸರಿಯಲ್ಲ ,ನಾನು ಸುಳ್ಳು ಸಾಕ್ಷಿ ಹೇಳುತ್ತಿದ್ದೇನೆ ಎಂದರೆ ಸರಿಯಲ್ಲ ಎಂದು ಪಾಟೀ ಸವಾಲಿಗೆ ಉತ್ತರಿಸುತ್ತಾರೆ.

ವಿಚಾರಣೆ ವೇಳೆಯಲ್ಲಿ ಮಾನ್ಯ ಸತ್ರ ನ್ಯಾಯಾಲಯದ ಆದೇಶದ ಖಂಡಿಕೆ 4ರಲ್ಲಿ ಸೂಚಿಸಿರುವ ತನಿಖಾದಿಕಾರಿಗಳಿಂದ ಗುರುತು ಮಾಡಲ್ಪಟ್ಟಿರುವ ನಿಶಾನೆ ಪಿ–1 (ರಾಸಾಯನಿಕ ವಿಶ್ಲೇಷಣೆ ಪ್ರತಿ) ನಿಶಾನೆ ಪಿ–2 (ಸೊತ್ತು ಪಟ್ಟಿ ಪ್ರತಿ ) ನಿಶಾನೆ ಪಿ–3 (ಸ್ಥಳ ಮಹಜರು ಪ್ರತಿ) ರ ನಕಲು ಪ್ರತಿಗಳನ್ನು ದೃಡೀಕರಿಸಿ ಪಡೆಯಲಾಗಿರುತ್ತದೆ.

ಶ್ರೀ.ಕೆ.ಗುರುಮೂರ್ತಿ ಅಬಕಾರಿ ನಿರೀಕ್ಷಕರು ಪಿಡಬ್ಲ್ಯೂ–2 ಇವರನ್ನು ದಿನಾಂಕ:12–9–2002 ರ ಮುಖ್ಯ ಸಾಕ್ಷಿ ವಿಚಾರಣೆಯನ್ನು ಮುಂದುವರಿಸಿ ರಕ್ಷಣಾ ಪರ ವಕೀಲರಾದ ಶ್ರೀ.ಸುಬ್ಬಯ್ಯ ರೈ ಇವರ ಪರವಾಗಿ ಶ್ರೀ.ಎಂ.ಕೆ ಆಳ್ವ ಇವರು ದಿನಾಂಕ:16–2–2010ರಂದು ಪಾಟೀ ಸವಾಲು ನಡೆಸಿ ಅಭಿಯೋಗದ ಪರ ಪಿ.ಡಬ್ಲ್ಯೂ–1ರವರು ಉತ್ತರಿಸುತ್ತಾ ಆ ದಿನ ನಮಗೆ ಈ ಪ್ರಕರಣದ ಬಗ್ಗೆ ವರ್ತಮಾನ ಬಂದಿರುವುದಿಲ್ಲ, ಆದರೆ ಅಬಕಾರಿ ಜಂಟಿ ಆಯುಕ್ತರು ರಸ್ತೆಗಾವಲು ನಡೆಸಲು ಸೂಚಿಸಿದ ಪ್ರಕಾರ ನಾವು ಆ ದಿವಸ ರಸ್ತೆಗಾವಲು ನಡೆಸಿರುತ್ತೇವೆ. ಆ ದಿನ ರಾತ್ರಿ 2 ಗಂಟೆ ಸಮಯ ನಾವು ಇಲಾಖಾ

ವಾಹನದಲ್ಲಿ ಕಚೇರಿಯಿಂದ ಹೊರಟಿರುತ್ತೇನೆ. ಆ ದಿನ ನಮ್ಮ ಜೊತೆ ಅಬಕಾರಿ ಉಪ ಅಧೀಕ್ಷಕರು, ಇಬ್ಬರು ಅಬಕಾರಿ ರಕ್ಷಕರು ಮತ್ತು ಒಬ್ಬರು ಚಾಲಕರು ನಮ್ಮ ಜೊತೆ ಇದ್ದರು, ನಾವು ಗಸ್ತು ಕರ್ತವ್ಯಕ್ಕೆ ಹೋಗಿರುವ ಬಗ್ಗೆ ನಮೂದಿಸಿರುತ್ತೇವೆ. ತಕ್ಷೀರು ಸ್ಥಳಕ್ಕೆ 15 ನಿಮಿಷ ದಲ್ಲಿ ತಲುಪಿರುತ್ತೇವೆ. ಆ ದಿನ ಕೆಲವೊಂದು ವಾಹನ ತಪಾಸಣೆ ಮಾಡಿದ್ದು ಅದರ ನಿಖರವಾದ ಸಂಖ್ಯೆ ತಿಳಿದಿರುವುದಿಲ್ಲ. ತಕ್ಷೀರು ಸ್ಥಳ ರಾಷ್ಟ್ರೀಯ ಹೆದ್ದಾರಿ ಆಗಿದ್ದು ಬಿ.ಸಿ ರೋಡಿನಿಂದ ಮಂಗಳೂರಿಗೆ ಹೋಗುವ ರಸ್ತೆಯಾಗಿರುತ್ತದೆ. ಸದ್ರಿ ರಸ್ತೆಯಲ್ಲಿ ಸದಾ ವಾಹನ ಸಂಚಾರ ಇರುತ್ತದೆ. ಆ ದಿನ ನಾವು ನಮ್ಮ ವಾಹನವನ್ನು ಯಾವ ಕಡೆಗೆ ಮುಖ ಮಾಡಿ ನಿಲ್ಲಿಸಿದ್ದೆವು ಎಂದು ನಿಖರವಾಗಿ ಹೇಳಲು ಸಾಧ್ಯವಿಲ್ಲ, ಏಕೆಂದರೆ ಅದನ್ನು ಯಾವ ಕಡೆಗೂ ತಿರುಗಿಸುವ ರೀತಿಯಲ್ಲಿ ನಿಲ್ಲಿಸಿದ್ದೆವು. ಮಹಜರಿನಲ್ಲಿ ತಕ್ಷೀರು ಸ್ಥಳದ ಚೆಕ್ ಬಂದಿ ನಮೂದಿಸಿಲ್ಲ. ತಕ್ಷೀರಿಗೆ ಸಂಬಂಧಪಟ್ಟ ವಾಹನವನ್ನು 3 ಗಂಟೆ ಸಮಯಕ್ಕೆ ನಾವು ಪ್ರಥಮವಾಗಿ ನೋಡಿರುತ್ತೇವೆ. ನನ್ನ ಜೊತೆ ಇದ್ದ ಸಿಬ್ಬಂಧಿ ಚೆನಿಯಪ್ಪ ನಾಯ್ಕ ವಾಹನವನ್ನು ನಿಲ್ಲಿಸಲು ಸನ್ನೆ ಮಾಡಿರುತ್ತಾರೆ. ನಾವು ವಾಹನ ಶೋಧಿಸುವ ಪೂರ್ವದಲ್ಲಿ ಸರ್ಚ್ ವಾರೆಂಟ್ ಪಡೆದಿರುವುದಿಲ್ಲ. ಹಾಗೂ ಪಡೆಯದೇ ಇರುವ ಕಾರಣದ ಬಗ್ಗೆ ದಾಖಲೆ ತಯಾರಿಸಿದ್ದು, ಆದರೆ ಈ ಬಗ್ಗೆ ಮಹಜರಿನಲ್ಲಿ ಉಲ್ಲೇಖ ಮಾಡಿರುವುದಿಲ್ಲ. ನಮ್ಮ ಸಿಬ್ಬಂಧಿಯವರು ವಾಹನದ ಟರ್ಪಾಲನ್ನು ತೆಗೆದಿರುತ್ತಾರೆ, ನಮ್ಮ ಸಿಬ್ಬಂಧಿಗಳ ಮೂಲಕನೇ ಮದ್ಯವನ್ನು ಲಾರಿಯಿಂದ ಕೆಳಗಿಳಿಸಿರುತ್ತೇವೆ, ಎಲ್ಲಾ 160 ಮದ್ಯದ ಬಾಟಲಿಗಳು ತುಂಬಿದ ಪೆಟ್ಟಿಗೆಗಳಿಗೆ ಕ್ರಮ ಸಂಖ್ಯೆ ನೀಡಿರುವುದಿಲ್ಲ. ಅವುಗಳನ್ನು ಪರಿಶೀಲನೆ ಮಾತ್ರ ಮಾಡಿರುತ್ತೇವೆ, ಎಲ್ಲಾ ಪೆಟ್ಟಿಗೆಗಳಲಿದ್ದ ಬಾಟಲಿಗಳನ್ನು ತೆಗೆದು ಮಾದರಿ ಸಂಗ್ರಹಿಸಿ ರುವುದಿಲ್ಲ. ಮಾದರಿ ಮೊಹರು ಚೀಟಿಯನ್ನು ಸ್ಥಳದಲ್ಲೇ ತಯಾರಿಸಿರುತ್ತೇವೆ. ನಿಶಾನೆ ಪಿ–3 ಮಹಜರು ನನ್ನ ಕೈಬರಹದಲ್ಲಿರುತ್ತದೆ. ತಕ್ಷೀರು ಸ್ಥಳದ ಬಳಿ ವಾಸದ ಮನೆ ಇರುವುದಿಲ್ಲ. ಆದರೆ ವಾಣಿಜ್ಯ ಕಟ್ಟಡ ಗಳಿರುತ್ತದೆ. ಸ್ವತಂತ್ರ ವ್ಯಕ್ತಿಗಳ ಸಾಕ್ಷಿ ಗಳಿಸಲು ನಾವು ಪ್ರಯತ್ನಿಸಿರುತ್ತೇವೆ ಆದರೆ ಯಾರೂ ಲಭ್ಯವಾಗಿರುವುದಿಲ್ಲ. ತಕ್ಷೀರು ಮುಂಜಾನೆ ಪತ್ತೆಯಾದ ಕಾರಣ ನಾವು ನಿಶಾನೆ ಪಿ–3 ನ್ನು ಸ್ಥಳದಲ್ಲಿಯೇ ತಯಾರಿಸಿಲ್ಲ, ಕಛೇರಿಯಲ್ಲೇ ತಯಾರಿಸಿರುತ್ತೇವೆ ಎಂದರೆ ಸರಿಯಲ್ಲ. ನಾವು ಆದಿನ ತಕ್ಷೀರು ಸ್ಥಳಕ್ಕೆ ಭೇಟಿ ಕೊಟ್ಟಿಲ್ಲ ಹಾಗೂ ಮುಖ್ಯ ವಿಚಾರಣೆಯಲ್ಲಿ ಹೇಳಿದಂತ ವಾಹನದಿಂದ ಯಾವುದೇ ಮದ್ಯ ವಶಪಡಿಸಿಲ್ಲ ಎಂದರೆ ಸರಿಯಲ್ಲ. ಮೇಲಾದಿಕಾರಿಗಳ ಮುಲಾಜಿಗೆ ತಕ್ಷೀರು ದಾಖಲಿಸಿದ್ದೇನೆ ಎಂದರೆ ಸರಿಯಲ್ಲ. ವಾಹನಕ್ಕೂ ತಕ್ಷೀರಿಗೂ ಯಾವುದೇ ಸಂಬಂಧ ಇಲ್ಲ ಎಂದರೆ ಸರಿಯಲ್ಲ, ನಾನು ಸುಳ್ಳು ಸಾಕ್ಷಿ ನುಡಿಯುತ್ತಿದ್ದೇನೆ ಎಂದರೆ ಸರಿಯಲ್ಲ, ಎಲ್ಲಾ ದಾಖಲಾತಿಗಳನ್ನು ಕಛೇರಿಯಲ್ಲಿ ನಮ್ಮ ಅನುಕೂಲಕ್ಕೆ ತಕ್ಕಂತೆ ತಯಾರಿಸಿದ್ದೇವೆ ಎಂದರೆ ಸರಿಯಲ್ಲ ಎಂದು ಪಾಟೀ ಸವಾಲಿಗೆ ಉತ್ತರಿಸಿರುತ್ತಾರೆ.

ಡಿಡಬ್ಲ್ಯೂ–1

ರಕ್ಷಣಾ ಸಾಕ್ಷಿದಾರರಾದ ಶ್ರೀ.ಡಿ.ಎಸ್.ಧರ್ಮಪ್ಪ, ಕೊಲ್ಲಗೇರಿ ಎಸ್ಟೇಟ್, ಹಾಸನ ಜಿಲ್ಲೆ ಇವರನ್ನು ರಕ್ಷಣಾ ಪರ ವಕೀಲರು ಡಿಡಬ್ಲ್ಯೂ–1 ರನ್ನಾಗಿ ದಿ:15–6–2010ರಂದು ಪ್ರಾದಿಕಾರದ ಮುಂದೆ ಹಾಜರು ಪಡಿಸಿ, ಸದ್ರಿ ರಕ್ಷಣಾ ಸಾಕ್ಷಿದಾರರು ಸಾಕ್ಷ್ಯ ನೀಡುತ್ತಾ ತಾನು ಈ ಕೇಸಿನ ಅರ್ಜಿದಾರನಾಗಿದ್ದು, ಈಚರ್ ಲಾರಿ ಸಂ:KA-21-167 ರ ಮಾಲೀಕನಾಗಿರುತ್ತೇನೆ. ತಾನು ಸಕಲೇಶಪುರದಲ್ಲಿ ಕಾಫಿ ಪ್ಲಾಂಟರ್‌ನಾಗಿರುತ್ತೇನೆ. ತಾನು ನನ್ನ ವಾಹನವನ್ನು ಹಾಸನದಿಂದ ಮಂಗಳೂರಿಗೆ ತರಕಾರಿ ಸಾಗಿಸಲು ಮತ್ತು ತನ್ನ ಸ್ವಂತ ತೋಟದ ಉಪಯೋಗಕ್ಕಾಗಿ ಬಳಸುತ್ತಿದ್ದೆ. ಮೇಲೆ ಹೇಳಿದ ವಾಹನಕ್ಕೆ ತಾನು ಬೇಲೂರು ಕೂಮಾರ ಎಂಬವರನ್ನು ಚಾಲಕನನ್ನಾಗಿ ತೆಗೆದು ಕೊಂಡಿದ್ದೆ. ಈ ಘಟನೆ ನಡೆಯುವ 4 ವರ್ಷದ ಹಿಂದೆ ಅವರನ್ನು ನೇಮಕ ಮಾಡಿದ್ದೆ. ಚಾಲಕ ನನ್ನು ನೇಮಿಸುವಾಗ ಅತನಿಗೆ ಯಾವುದೇ ಕೆಟ್ಟ ಕೆಲಸ ಮಾಡಬಾರದೆಂದು ಹಾಗೂ ಬೇಡದ ವಸ್ತುಗಳನ್ನು ಸಾಗಾಣಿಕೆ ಮಾಡಬಾರದೆಂದು ತಿಳಿಸಿದ್ದೆ. ಆ ಸಮಯದಲ್ಲಿ ನಾನು ಅವನ ಪೂರ್ವಾಪರಗಳನ್ನು ವಿಚಾರಿಸಿದ್ದೆ. ದಿ:3–7–98 ರಂದು ಹಾಸನದಿಂದ ಮೇಲೆ ಹೇಳಿದ ಲಾರಿಗೆ ತರಕಾರಿ ಲೋಡ್ ಮಾಡಿ ಮಂಗಳೂರಿಗೆ ಕಳುಹಿಸಿದ್ದೆ, ಮಾರನೇ ದಿವಸ ಬೆಳಿಗ್ಗೆ ಪೇಪರ್ ನೋಡಿದಾಗ ತನಗೆ ತನ್ನ ವಾಹನವನ್ನು ಅಬಕಾರಿ ಪೊಲೀಸರು ವಶಪಡಿಸಿಕೊಂಡ ಸುದ್ದಿ ಗೊತ್ತಾಗಿ ತಾನು ಮಂಗಳೂರಿಗೆ ಕೂಡಲೇ ಬಂದು ಅಬಕಾರಿ ನಿರೀಕ್ಷಕರನ್ನು ವಿಚಾರಿಸಿದಾಗ ಆ ವಾಹನದಲ್ಲಿ ಅಕ್ರಮ ಮದ್ಯ ಸಾಗಾಟ ಮಾಡುತ್ತಿದ್ದುದರಿಂದ ಅದನ್ನು ನಾವು ಜಪ್ತು ಮಾಡಿದ್ದೇವೆಂದು ಅವರು ತಿಳಿಸಿದರು. ಸದ್ರಿ ಸಾಗಾಟದ ಬಗ್ಗೆ ತನಗೆ ಯಾವುದೇ ಮಾಹಿತಿ ಇಲ್ಲದ ಕಾರಣ ತನ್ನ ವಾಹನವನ್ನು ಬಿಟ್ಟು ಕೊಡಲು ಅಬಕಾರಿ ನಿರೀಕ್ಷಕರ ಹತ್ತಿರ ಕೇಳಿದೆ, ವಾಹನವನ್ನು ಬಿಟ್ಟುಕೊಡಲು ಸಾದ್ಯವಿಲ್ಲ, ನೀವು ನ್ಯಾಯಾಲಯಕ್ಕೆ ಅರ್ಜಿ ಸಲ್ಲಿಸಿ ಎಂದು ತಿಳಿಸಿದರು. ಆ ಪ್ರಕಾರ ತಾನು ಈ ಪ್ರಾದಿಕಾರದ ಮುಂದೆ ತನ್ನ ವಾಹನವನ್ನು ವಶಕ್ಕೆ ಕೇಳಿ ಅರ್ಜಿ ಸಲ್ಲಿಸಿದ್ದೆ. ಈ ಮದ್ಯ ಸಾಗಾಣಿಕೆಯಲ್ಲಿ ತಾನು ಪ್ರತ್ಯೇಕ ಅಥವಾ ಪರೋಕ್ಷವಾಗಿ ಭಾಗಿಯಾಗಿಲ್ಲ ತನ್ನ ಪ್ರಕಾರ ಈ ವಾಹನದಲ್ಲಿ ಯಾವುದೇ ಮದ್ಯ: ಇತರ ಮಾಲನ್ನು ಸಾಗಾಟ ಮಾಡಿಲ್ಲ. ಆದ

ಕಾರಣ ತನಗೆ ವಾಹನವನ್ನು ಬಿಟ್ಟು ಕೊಡಬೇಕಾಗಿ ತಾನು ಈ ಪ್ರಾಧಿಕಾರದ ಮುಂದೆ ಕೇಳಿಕೊಳ್ಳುತ್ತೇನೆ. ತನ್ನ ಮೇಲೆ ಯಾವುದೇ ಕ್ರಿಮಿನಲ್ ಮೊಕದ್ದಮೆ ಇರುವುದಿಲ್ಲ ಎಂದು ರಕ್ಷಣಾ ಸಾಕ್ಷಿ ನೀಡಿರುತ್ತಾರೆ.

**ಪಾಟೀ ಸವಾಲು:ಎ.ಡಿಪಿ ರವರಿಂದ:**

ತಾನು ನನ್ನ ಚಾಲಕನನ್ನು ವಾಹನಕ್ಕೆ ನೇಮಿಸುವ ಹಿಂದೆ ಸುಮಾರು 4 ವರ್ಷಗಳ ಪರಿಚಯ ತನಗಿತ್ತು ,ಅತನ ಎಲ್ಲಾ ಕುಟುಂಬದ ಪರಿಚಯ ತನಗಿತ್ತು. ತಾನು ಮೇಲೆ ಹೇಳಿದ ವಾಹನವನ್ನು ಮೊದಲ ಬಾರಿಗೆ ಖರೀದಿಸಿದ್ದೆ. ಅದರ ಹಿಂದೆ ತಾನು ಯಾವುದೇ ವಾಹನ ಖರೀದಿಸಿರುವುದಿಲ್ಲ. ಚಾಲಕನನ್ನು ಮೇಲೆ ಹೇಳಿದ ವಾಹನಕ್ಕೆ ನೇಮಿಸುವಾಗ ಕಾನೂನು ಬಾಹಿರ ಕೆಲಸಕ್ಕೆ ವಾಹನವನ್ನು ಬಳಸಬಾರದು ಎಂದು ಆತನಿಗೆ ಲಿಖಿತವಾಗಿ ತಿಳಿಸಿರುವುದಿಲ್ಲ. ತಾನು ತನ್ನ ಚಾಲಕನಲ್ಲಿ ಮೇಲೆ ಹೇಳಿದಂತೆ ಕಾನೂನುಬಾಹಿರ ಕೃತ್ಯ ನಡೆಸಬಾರದಾಗಿ ಆಗಿಂದಾಗ್ಗೆ ಹೇಳುತ್ತಿದ್ದೆ, ಆತನ ಚಟುವಟಿಕೆಗಳ ಬಗ್ಗೆ ಬೇರೆಯಾರಿಂದಲೂ ತಿಳಿದುಕೊಂಡಿರುವುದಿಲ್ಲ. ಆತನ ಪೂರ್ವಾಪರದ ಬಗ್ಗೆ ಚಾಲಕ ನಲ್ಲದೇ ಬೇರೆ ಯಾರಿಂದಲೂ ವಿಚಾರಿಸಿರುವುದಿಲ್ಲ. ನಾನು ಮಾರನೇ ದಿವಸ ಕನ್ನಡ ಪ್ರಭದಲ್ಲಿ ವಾಹನವನ್ನು ಮಂಗಳೂರಿನಲ್ಲಿ ಅಬಕಾರಿ ಅಧಿಕಾರಿಗಳು ಅಮಾನತ್ತು ಪಡಿಸಿರುವ ಬಗ್ಗೆ ಓದಿರುತ್ತೇನೆ. ನನ್ನ ಚಾಲಕನು ಮೇಲೆ ಹೇಳಿದ ಘಟನೆಯ ನಂತರ ತನ್ನ ಲಾರಿಯನ್ನು ಬಿಟ್ಟುಹೋಗಿರುತ್ತಾನೆ. ನಾನು ಮಂಗಳೂರಿಗೆ ಬಂದು ಅಬಕಾರಿ ಅಧಿಕಾರಿಗಳಲ್ಲಿ ತನ್ನ ವಾಹನದಲ್ಲಿದ್ದ ಅಕ್ರಮ ಮದ್ಯದ ಬಾಟಲಿಗಳ ಬಗ್ಗೆ ವಿಚಾರಿಸಿರುವುದಿಲ್ಲ. ಆ ರೀತಿ ವಿಚಾರಿಸದೇ ಇರಲು ಕಾರಣಗಳಿರುವುದಿಲ್ಲ. ಘಟನೆ ನಂತರ ಚಾಲಕ ಎಲ್ಲಿದ್ದಾನೆಂದು ತನಗೆ ಗೊತ್ತಿಲ್ಲ. ಆತನನ್ನು ತಾನು ಹುಡುಕಿದ್ದರೂ ಅತ ಸಿಗಲಿಲ್ಲ. ಆತ ಊರಿನಲ್ಲಿದ್ದಾನೋ ಇಲ್ಲವೋ ಎಂದು ಹೇಳಲು ತನಗೆ ಬರುವುದಿಲ್ಲ, ದಿ:4–7–1998ರಂದು ತನಗೆ ಸೇರಿದ ಈಚರ್ ಕ್ಯಾಂಟರ್ ವಾಹನದಲ್ಲಿ ಚಾಲಕನು ಅಕ್ರಮವಾಗಿ ಮದ್ಯದ ಪೆಟ್ಟಿಗೆಗಳನ್ನು ಸಾಗಾಟ ಮಾಡುತ್ತಿದ್ದುದರಿಂದ ಅಬಕಾರಿ ನಿರಿಕ್ಷಕರು ಹಾಗೂ ಇತರ ಸಿಬ್ಬಂಧಿಗಳು ತನ್ನ ವಾಹನವನ್ನು ವಶಪಡಿಸಿಕೊಂಡು ಪ್ರಕರಣ ದಾಖಲಿಸಿರುತ್ತಾರೆ ಎಂದರೆ ಸರಿಯಲ್ಲ, ಹಾಗೂ ಸದ್ರಿ ವಾಹನದಲ್ಲಿ ಆ ಸಂದರ್ಭದಲ್ಲಿ ಮದ್ಯದ ಪಟ್ಟಿಗೆಗಳನ್ನು ಅಕ್ರಮವಾಗಿ ಸಾಗಾಟ ಮಾಡುವ ವಿಚಾರ ತನಗೆ ಖುದ್ದಾಗಿ ಗೊತ್ತಿರುತ್ತದೆ ಹಾಗೂ ಈ ಬಗ್ಗೆ ಯಾವುದೇ ಮುಂಜಾಗ್ರತೆ ತೆಗೆದುಕೊಂಡಿರುವುದಿಲ್ಲ ಎಂದರೆ ಸರಿಯಲ್ಲ, ಹಾಗೂ ತನ್ನ ವಾಹನವನ್ನು ಅಬಕಾರಿ ಕಾಯಿದೆ ಅಡಿ ಅಕ್ರಮ ಮದ್ಯದ ಪೆಟ್ಟಿಗೆಗಳನ್ನು ಸಾಗಾಣಿಕೆ ಮಾಡಿರುವ ಕಾರಣ ಮುಟ್ಟುಗೋಲು ಹಾಕಿಕೊಳ್ಳಲು ಅರ್ಹ ಎಂದರೆ ಸರಿಯಲ್ಲ, ತಾನು ಈ ಪ್ರಾಧಿಕಾರದಲ್ಲಿ ಈಗ ಸುಳ್ಳು ಸಾಕ್ಷಿ ಹೇಳುತ್ತಿದ್ದೇನೆ ಎಂದರೆ ಸರಿಯಲ್ಲ ಎಂದು ಪಾಟೀ ಸವಾಲಿಗೆ ಉತ್ತರಿಸುತ್ತಾರೆ.

ಪ್ರಕರಣದಲ್ಲಿ ಈ ಹಿಂದಿನ ಅಭಿಯೋಗದ ಪರ ಸಾಕ್ಷಿ ವಿಚಾರಣೆಯನ್ನು ಮುಂದುವರಿಸಿ ಮೇಲಿನಂತೆ ನಡೆಸಲಾದ ಪಿಡಬ್ಲ್ಯೂ–1 ಮತ್ತು ಪಿಡಬ್ಲ್ಯೂ–2 ರವರ ಪಾಟೀ ಸವಾಲು ವಿವರಣೆ ಹಾಗೂ ರಕ್ಷಣಾ ಪರ ಸಾಕ್ಷಿ ವಿಚಾರಣಾ ಅಂಶಗಳು ಮತ್ತು ರಕ್ಷಣಾ ವಕೀಲರ ಹಾಗೂ ಅಭಿಯೋಗದ ವಾದ ವಿವಾದವನ್ನು ಆಲಿಸಿ, ಈ ಹಿಂದಿನ ವಿಚಾರಣೆ ಸಂದರ್ಭದಲ್ಲಿ ಗುರುತಿಸಲಾಗಿರುವ ನಿಶಾನೆ ಪಿ–1, 2 ಮತ್ತು 3 ರವರೆಗಿನ ದಾಖಲಾತಿಗಳನ್ನು ಅವಲೋಖನೆ ಮಾಡಿ ದಿನಾಂಕ:4–7–1998 ರಂದು ಜಪ್ತು ಪಡಿಸಿರುವ ಈಚರ್ ಕ್ಯಾಂಟರ್ ಲಾರಿ ಸಂ:KA-21-167 ರಲ್ಲಿ 1387.440 ಲೀಟರು ಭಾರತೀಯ ತಯಾರಿಕಾ ಮದ್ಯವನ್ನು ಅಕ್ರಮವಾಗಿ ಸಾಗಾಟ ಮಾಡಿರುವುದನ್ನು ಕಾನೂನಿನಂತೆ ಕ್ರಮ ಜರುಗಿಸಿ ಮಹಜರು ತಯಾರಿಸಲು ಸ್ಥಳೀಯ ಸಾಕ್ಷಿದಾರರನ್ನು ಪಡೆಯಲು ಸಾಕಷ್ಟು ಪ್ರಯತ್ನ ಪಟ್ಟರೂ ದೊರೆಯದ ಕಾರಣ ಸಿಬ್ಬಂಧಿ ಸಮಕ್ಷಮದಲ್ಲಿ ವಾಹನ ಪರಿಶೀಲನೆ ಪೂರ್ವದಲ್ಲಿ ಸರ್ಚ್ ಮೆಮೋ ತಯಾರಿಸಿ ಸೊತ್ತು ಸಮೇತ ವಾಹನ ವಶಪಡಿಸಿಕೊಂಡಿದ್ದು, ಅಕ್ರಮ ಮದ್ಯ ಸಾಗಾಣಿಕೆಗೆ ಈಚರ್ ಕ್ಯಾಂಟರ್ ಲಾರಿ ಸಂ:KA-21-167ನ್ನು ಬಳಸಿರುವುದು ಪ್ರಾಧಿಕಾರದ ಮುಂದೆ ವಿಚಾರಣೆಗೆ ಒಳಪಟ್ಟಿರುವ ಸಾಕ್ಷ್ಯಾಧಾರಗಳಿಂದ ಸಾಬೀತಾಗಿರುವುದರಿಂದ ಅಂದಿನ ಪ್ರಾಧಿಕಾರದ ದಿನಾಂಕ:24–10–2007ರ ಅಂತಿಮ ಆದೇಶವನ್ನು ಎತ್ತಿ ಹಿಡಿದು ಒಂದನೇ ಅಂಶವನ್ನು ಗುಣಾತ್ಮಕವಾಗಿ ಪರಿಗಣಿಸಲಾಗಿದೆ.

ಅಕ್ರಮ ಮದ್ಯ ಸಾಗಾಟ ತನ್ನ ತಿಳುವಳಿಕೆಗೆ ಬಾರದೇ ನಡೆದಿದೆ ಎಂಬುದನ್ನು ಸಾಕ್ಷ್ಯಾಧಾರಗಳೊಂದಿಗೆ ಸಾಭೀತುಪಡಿಸುವುದು ವಾಹನದ ಮಾಲೀಕರ ಆದ್ಯ ಹೊಣೆಗಾರಿಕೆಯಾಗಿರುತ್ತದೆ. ಪ್ರಕರಣದಲ್ಲಿ ಜಪ್ತುಪಡಿಸಿಕೊಂಡ ಈಚರ್ ಕ್ಯಾಂಟರ್ ಲಾರಿ ಸಂ:KA-21-167 ಇದರ ಮಾಲೀಕರು ಪ್ರಕರಣದಲ್ಲಿ ವಾಹನ ಜಪ್ತಾದ ತಕ್ಷಣದಲ್ಲಿ ವಾಹನದ ಮದ್ಯಂತರ ಬಿಡುಗಡೆ ಬಗ್ಗೆ ಅರ್ಜಿ ಸಲ್ಲಿಸಿ ಮದ್ಯಂತರ ಬಿಡುಗಡೆಗೆ ಕೋರಿರುವರಾದರೂ ವಾಹನವನ್ನು ತನ್ನ ಗಮನಕ್ಕೆ ಬಾರದೇ ಅಕ್ರಮ ಮದ್ಯ ಸಾಗಾಣಿಕೆಗೆ ಚಾಲಕನಿಂದ ಬಳಸಲಾಗಿತ್ತು ಎಂಬ ಬಗ್ಗೆ ಪರಾವೆಗಳೊಂದಿಗೆ ಸಾಬೀತುಪಡಿಸಲು ಪ್ರಯತ್ನಿಸಿರುವುದು ಕಂಡುಬರುವುದಿಲ್ಲ. ಈ ಹಿಂದಿನ ವಿಚಾರಣೆ ಸಂದರ್ಭಗಳಲ್ಲಿ ಸಾಕಷ್ಟು ಕಾಲಾವಕಾಶ ನೀಡಿ ಪ್ರಾಧಿಕಾರದ ಮುಂದೆ ಹಾಜರಾಗಲು ವಾಹನದ ಮಾಲೀಕರಿಗೆ/ ಪರ ವಕೀಲರಿಗೆ ನೋಟಿಸುಗಳನ್ನು ನೀಡಲಾಗಿದ್ದರೂ, ವಾಹನದ ಮಾಲೀಕರು

ಪ್ರಾಧಿಕಾರದ ಮುಂದೆ ಹಾಜರಾಗಿ ವಿಚಾರಣೆಗೆ ಸಹಕರಿಸಿರುವುದಿಲ್ಲ. ಹಾಗೂ ಸದ್ರಿ ಮುಟ್ಟುಗೋಲು ಆದೇಶದ ಕಾರಣಗಳನ್ನು ನಮೂದಿಸಿ ಮಾನ್ಯ ಹೆಚ್ಚುವರಿ ಸತ್ರ ನ್ಯಾಯಾಲಯವು ಪ್ರಾಧಿಕಾರದ ಆದೇಶವನ್ನು ತಳ್ಳಿಹಾಕಿ ಮರು ವಿಚಾರಣೆಗೆ ಹೊರಡಿಸಿದ ತೀರ್ಪು ಆದೇಶದ ನಂತರದಲ್ಲಿ ವಾಹನದ ಮಾಲೀಕರು ಎಚ್ಚೆತ್ತು ಪ್ರಾಧಿಕಾರ ನಡೆಸಿದ ಮುಟ್ಟುಗೋಲು ನಡವಳಿ ಅಭಿಯೋಗದ ಸಾಕ್ಷಿ ಹಾಗೂ ರಕ್ಷಣಾ ಸಾಕ್ಷಿ ವಿಚಾರಣಾ ಸಂದರ್ಭದಲ್ಲಿ ಪ್ರಾಧಿಕಾರದ ಮುಂದೆ ಹಾಜರಾಗಿ ರಕ್ಷಣಾ ಹೇಳಿಕೆಗಳನ್ನು ನೀಡಿದ್ದು, ಸದ್ರಿ ಸಾಕ್ಷಿಯಲ್ಲಿ ವಿವರಣೆ ನೀಡುತ್ತಾ ತನ್ನ ವಾಹನಕ್ಕೆ ನೇಮಿಸಲಾದ ಚಾಲಕನಿಗೆ ನೇಮಕ ಪೂರ್ವದಲ್ಲಿ ವಾಹನವನ್ನು ಯಾವುದೇ ಅಕ್ರಮ ಚುಟುವಟಿಕೆಗಳಿಗೆ ಅಥವಾ ಅಕ್ರಮ ಸೊತ್ತುಗಳ ಸಾಗಾಣಿಕೆಗೆ ಉಪಯೋಗಿಸಬಾರದೆಂದು ಸೂಕ್ತ ಎಚ್ಚರಿಕೆ ನೀಡಲಾಗಿದೆ ಎಂದು ಮೌಖಿಕ ಹೇಳಿಕೆ ನೀಡಿರುವರಾದರೂ ಈ ಬಗ್ಗೆ ಲಿಖಿತ ಎಚ್ಚರಿಕೆ ಪತ್ರ ವಾಹನದ ಮಾಲೀಕರಿಂದ ಚಾಲಕನಿಗೆ ನೀಡಿರುವುದಾಗಲೀ ಅಥವಾ ವಾಹನದ ಮಾಲೀಕರು ಚಾಲಕನಿಂದ ಈ ಬಗ್ಗೆ ಯಾವುದೇ ಭದ್ರತಾ ಲಿಖಿತ ಹೇಳಿಕೆಗಳನ್ನು ಪಡೆದಿರುವ ಬಗ್ಗೆಯಾಗಲೀ ಪುರಾವೆಗಳೊಂದಿಗೆ ಸಾಬೀತುಪಡಿಸಿರುವುದಿಲ್ಲ. ಇದರಿಂದ ವಾಹನದ ಮಾಲೀಕರು ಮಾನ್ಯ ಸತ್ರ ನ್ಯಾಯಾಲಯದಲ್ಲಿ ಪ್ರಾಧಿಕಾರದ ಮುಟ್ಟುಗೋಲು ಆದೇಶ ತಳ್ಳಿಹಾಕಲ್ಪಟ್ಟಿರುವುದರ ಲಾಭಾಂಶ ವನ್ನು ಪಡೆದು ತಾನು ಅಪರಾಧವೆಸಗಿರುವುದನ್ನು ಮರೆಮಾಚಿ ಕೊಳ್ಳುವ ಸಲುವಾಗಿ ಪ್ರಾಧಿಕಾರದ ವಿಚಾರಣಾ ವೇಳೆಯಲ್ಲಿ ರಕ್ಷಣಾ ಸಾಕ್ಷಿ ನುಡಿಯಲು ಮುಂದಾಗಿರುತ್ತಾರೆ. ಹಾಗೂ ವಾಹನದ ಮಾಲೀಕರು ವಾಹನದ ಬಗ್ಗೆ ತನ್ನ ನೈಜ ಜವಾಬ್ದಾರಿಕೆಯಿಂದ ನುಸುಳಿ ಕೊಂಡಿರುವುದು ಕೂಡಾ ಪ್ರಾಧಿಕಾರದ ಗಮನಕ್ಕೆ ಬಂದಿರುತ್ತದೆ. ಇದರಿಂದ ಸದ್ರಿ ಈಚರ್ ಕ್ಯಾಂಟರ್ ಲಾರಿಯ ಮಾಲೀಕನು ಚಾಲಕನೊಂದಿಗೆ ಶಾಮೀಲಾಗಿ ಈ ಕೃತ್ಯ ಎಸಗಿರುವುದು ಮೇಲ್ನೋಟಕ್ಕೆ ಸಾಬೀತಾಗಿರುತ್ತದೆ. ಕಾರಣ ಪತ್ತೆಯಾಗಿರುವ ಅಪರಾಧ ವಾಹನದ ಮಾಲೀಕರ ಅಥವಾ ವಾಹನದ ಸುಪರ್ಧಿ ಹೊಂದಿರುವವರ ತಿಳುವಳಿಕೆಯಿಂದಲೇ ನಡೆದಿದೆ ಎಂಬುದು ಪ್ರಾಧಿಕಾರಕ್ಕೆ ಮನದಟ್ಟಾಗಿರುವುದರಿಂದ ಎರಡನೆಯ ಅಂಶವನ್ನು ನಕಾರಾತ್ಮಕವಾಗಿ ಪರಿಗಣಿಸಿದೆ.

ಈ ಮೇಲಿನ ಎಲ್ಲಾ ಕಾರಣಗಳಿಂದ ಪ್ರಕರಣದ ಮರು ವಿಚಾರಣೆ ನಡೆಸಿ ಅಭಿಯೋಗದ ಪರ ಸಾಕ್ಷಿಗಳ ಹಾಗೂ ರಕ್ಷಣಾ ಸಾಕ್ಷಿಗಳ ವಿಚಾರಣೆ ಹಾಗೂ ಲಭ್ಯವಿರುವ ದಾಖಲಾತಿಗಳಿಂದ ಈ ಪ್ರಕರಣದಲ್ಲಿ ಜಪ್ತು ಪಡಿಸಲಾಗಿರುವ ಈಚರ್ ಕ್ಯಾಂಟರ್ ಲಾರಿ ಸಂ:KA-21-167 ನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಪ್ರಾಧಿಕಾರದಲ್ಲಿ ನಡೆಸಲಾದ ಮರು ವಿಚಾರಣೆಯಿಂದ ಸಾಕ್ಷ್ಯದಾರ ಸಾಬೀತಾಗಿರುವುದಾಗಿ ಈ ಪ್ರಾಧಿಕಾರಕ್ಕೆ ಮನದಟ್ಟಾಗಿರುವ ಕಾರಣ ಈ ಆದೇಶ.

**ಆದೇಶ**

ನೂರ್ ಮಹಮ್ಮದ್ ಹುಸೇನ್, ಅಧಿಕೃತ ಅಧಿಕಾರಿ ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್, ದ.ಕ.ಜಿಲ್ಲೆ, ಮಂಗಳೂರು ಆದ ನಾನು ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 43ಎ ಅಡಿಯಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸಿ,ನಿಯಮ 43ಬಿ ರಲ್ಲಿ ಅನುಸರಿಸಬೇಕಾದ ಕ್ರಮಗಳನ್ನು ಜರುಗಿಸಿದ ನಂತರ ಈ ಹಿಂದೆ ಪ್ರಾಧಿಕಾರದಿಂದ ಹೊರಡಿಸಲಾದ ಮುಟ್ಟುಗೋಲು ಆದೇಶದ ವಿರುದ್ಧ ವಾಹನದ ಮಾಲೀಕರು ಮಾನ್ಯ 3ನೇ ಹೆಚ್ಚುವರಿ ಸತ್ರ ನ್ಯಾಯಾಲಯ, ದ.ಕ. ಜಿಲ್ಲೆ, ಮಂಗಳೂರು ಇಲ್ಲಿ ಸಲ್ಲಿಸಿದ ಕ್ರಿಮಿನಲ್ ಅಪೀಲ್ ಸಂ:324/2007 ದಿ:18–2–2009ರ ತೀರ್ಪು ಅದೇಶವನ್ನು ಗೌರವಿಸಿ ಪ್ರಕರಣದಲ್ಲಿ ಮರು ವಿಚಾರಣೆ ನಡೆಸಿ ಅಬಕಾರಿ ನಿರೀಕ್ಷಕರು(2), ಗುಪ್ತ ವಾರ್ತದಳ, ಮಂಗಳೂರು ಇವರ ತಕ್ಷೀರು ಸಂ: 1/98–99, ದಿ:4–7–98ರಲ್ಲಿ ಜಪ್ತುಪಡಿಸಿರುವ ಈಚರ್ ಕ್ಯಾಂಟರ್ ಲಾರಿ ಸಂ:KA-21-167 (ನಂಬ್ರ:HD31-501882, ಚಾಸಿಸ್ ನಂಬ್ರ :HEC 00313145) ನ್ನು ಕರ್ನಾಟಕ ಅಬಕಾರಿ ಕಾಯಿದೆ 1965ರ ನಿಯಮ 43ಎ(2) ರನ್ವಯ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತೇನೆ.

ಪ್ರಾಧಿಕಾರದಿಂದ ದಿ:05.1.1998ರಂದು ವಾಹನ ಈಚರ್ ಕ್ಯಾಂಟರ್ ಲಾರಿ ಸಂ:KA-21-167ನ್ನು ತಾತ್ಕಾಲಿಕವಾಗಿ ಮಧ್ಯಂತರ ಬಿಡುಗಡೆಗೊಳಿಸಿ ಹೊರಡಿಸಿರುವ ಆದೇಶವನ್ನು ರದ್ದುಗೊಳಿಸಿ ಆದೇಶಿಸಿದೆ. ಆರ್.ಸಿ. ಮಾಲೀಕರು ಸದರಿ ಮಧ್ಯಂತರ ಬಿಡುಗಡೆ ಹೊಂದಿರುವ ಈಚರ್ ಕ್ಯಾಂಟರ್ ಲಾರಿ ಸಂ:KA-21-167ನ್ನು ಈ ಆದೇಶದ 30 ದಿನಗಳ ಒಳಗೆ ಈ ಪ್ರಾಧಿಕಾರದ ವಶಕ್ಕೆ ಅಬಕಾರಿ ನಿರೀಕ್ಷಕರು, ಮಂಗಳೂರು ದಕ್ಷಿಣ ವಲಯ–II ಇವರಲ್ಲಿ ಒಪ್ಪಿಸಲು ಆದೇಶಿಸಿದೆ. ತಪ್ಪಿದಲ್ಲಿ ಭದ್ರತೆಯಾಗಿ ನೀಡಿರುವ ರೂ.1,50,000/– ಮೌಲ್ಯದ ಇಂಡೆಮಿನಿಟಿ ಬಾಂಡ್ ಮೊತ್ತ ಸರ್ಕಾರಕ್ಕೆ ಪಡೆಯಲು ಭದ್ರತೆ ನೀಡಿರುವ ಶ್ಯೂರಿಟಿದಾರರಾದ ಶ್ರೀ.ಕೃಷ್ಣ ಸ್ವಾಮಿ ಬಿನ್: ಹನುಮಂತಪ್ಪ, ಕೆಳಕೋಟೆ ಎಕ್ಸ್‌ಟೆಷನ್, ಚಿತ್ರದುರ್ಗ ಜಿಲ್ಲೆ ಇವರು ಹೊಂದಿರುವ ಜಮೀನನ್ನು ಸರ್ಕಾರದ ಪರ ಪರಭಾರೆ ಮಾಡಿಕೊಳ್ಳುವರೇ ಸೂಕ್ತ ಕ್ರಮ ಕೈಗೊಳ್ಳಲು ಆದೇಶಿಸಿದೆ. ಈ ಆದೇಶದ

ಪಾಲನೆ ಹಾಗೂ ಸದ್ರಿ ಮುಟ್ಟುಗೋಲು ಹಾಕಿಕೊಳ್ಳಲಾದ ವಾಹನವನ್ನು ಅಬಕಾರಿ ನಿರೀಕ್ಷಕರು, ಮಂಗಳೂರು ದಕ್ಷಿಣ ವಲಯ–II ಇವರು 30 ದಿನಗಳೊಳಗೆ ತನ್ನ ಸ್ವಾಧೀನಕ್ಕೆ ವಶಪಡಿಸಿಕೊಂಡು ಈ ಪ್ರಾಧಿಕಾರಕ್ಕೆ ವರದಿ ಒಪ್ಪಿಸಲು ಆದೇಶಿಸಿದೆ.

ಈ ಆದೇಶವನ್ನು ದಿ:29–06–2010ರಂದು ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು

ಈ ಆದೇಶವು ಇಂದಿನಿಂದ 30 ದಿವಸಗಳ ನಂತರ ಜಾರಿಯಲ್ಲಿ ಬರುತ್ತದೆ.

**ನೂರ್ ಮಹಮ್ಮದ್ ಹುಸೇನ್**
ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್
ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

**ಅನುಬಂಧ–I**

ಫಿರ್ಯಾದುದಾರರ ಪರ ಮಂಡಿಸಲಾದ ಸಾಕ್ಷಿಗಳ ವಿವರ:–

ಪ್ರಾ.ಸಾ–I : ಶ್ರೀ.ಯಶವಂತ ಕುಮಾರ್,
ನಿವೃತ್ತ ಅಬಕಾರಿ ನಿರೀಕ್ಷಕರು, ಉಳ್ಳಾಲ ವಲಯ

ಪ್ರಾ.ಸಾ–2 : ಶ್ರೀ . ಕೆ.ಗುರುಮೂರ್ತಿ,
ನಿವೃತ್ತ ಅಬಕಾರಿ ನಿರೀಕ್ಷಕರು
ಗುಪ್ತವಾರ್ತದಳ ಉಡುಪಿವಿಭಾಗ.

**ಅನುಬಂಧ–II**

ಫಿರ್ಯಾದುದಾರರ ಪರ ಮಂಡಿಸಲಾದ ದಾಖಲೆಗಳು:–

1) ನಿಶಾನೆ ಪಿ–1 : ರಾಸಾಯನಿಕ ತಜ್ಞರ ವರದಿ ದಿ:13.12.2001 ರ ಪ್ರತಿ
2) ನಿಶಾನೆ ಪಿ–2 : ಸರ್ಚ್ ಮೆಮೋ ಪ್ರತಿ
3) ನಿಶಾನೆ ಪಿ–3 : ಮಹಜರು ಪ್ರತಿ
4) ನಿಶಾನೆ ಪಿ–3ಎ : ಮಹಜರು ಪ್ರತಿಯ ಮೇಲಿನ ಸಹಿ

**ಅನುಬಂಧ–III**

ವಾಹನ ಮಾಲೀಕರ ಪರವಾಗಿ ರಕ್ಷಣಾ ವಿಚಾರಣೆ ಮಾಡಲಾದ ಸಾಕ್ಷಿದಾರರು :–

ಡಿಡಬ್ಲ್ಯೂ–1 : ಶ್ರೀ.ಡಿ.ಎಸ್.ಧರ್ಮಪ್ಪ ,
ಬಿನ್:ಶಾಂತಮಲ್ಲಪ್ಪ, ಕಾಫಿ ಪ್ಲಾಂಟರ್ಸ್
ಕೊಲ್ಲಗೇರಿ ಎಸ್ಟೇಟ್, ದೋಣಿಗಲ್ ಅಂಚೆ,
ಸಕಲೇಶಪುರ, ಹಾಸನ ಜಿಲ್ಲೆ

**ಅನುಬಂಧ–IV**

ವಾಹನ ಮಾಲೀಕರ ಪರವಾಗಿ ಗುರುತಿಸಲಾದ ದಾಖಲೆಗಳು :–

– ಯಾವುದು ಇಲ್ಲ –

**ನೂರ್ ಮಹಮ್ಮದ್ ಹುಸೇನ್**
ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್
ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

ಪಿ.ಆರ್.1089

**ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್ ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು, ಇವರ ನ್ಯಾಯಾಲಯದಲ್ಲಿ**

**ನಂ: ಎಸ್‌ಡಿಕೆ/68/ಡಿಟಿಸಿಆರ್/2009–10, ದಿನಾಂಕ:19ನೇ ಜೂನ್, 2010**

**ಉಪಸ್ಥಿತರು:** ನೂರ್ ಮಹಮ್ಮದ್ ಹುಸೇನ್
ಅಧಿಕೃತ ಅಧಿಕಾರಿ ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್ ದಕ್ಷಿಣ ಕನ್ನಡ ಜಿಲ್ಲೆ
ಮಂಗಳೂರು.

**ಫಿರ್ಯಾದುದಾರರು:**

ಪೊಲೀಸ್ ನಿರೀಕ್ಷಕರು
ವಿಶೇಷ ಪೊಲೀಸ್ ಠಾಣೆ,
ಅಬಕಾರಿ ಜಾರಿ ಮತ್ತು ಲಾಟರಿ ನಿಷೇಧ ದಳ
ಬಂದರು, ಮಂಗಳೂರು.

**ಆರೋಪಿಗಳು:**

1) ನಾರಾಯಣ, ಬಿನ್ ವೆಂಕಪ್ಪ ಮೂಲ್ಯ
ವಾಸ:ಮೈಂದಾಳ ಮನೆ, ನಾವೂರು
ಗ್ರಾಮ & ಅಂಚೆ, ಬಂಟ್ವಾಳ ತಾಲೂಕು
2) ಕೆ.ಎಂ.ಪ್ರವೀಣ ಬಿನ್ ದಿ:ಮಲ್ಲೇಗೌಡ,
ಕೆನಗನ ಹಳ್ಳಿ, ಹೆತ್ತೂರು ಹೊಬಳಿ,
ನಿಡಿಗೇರಿ ಅಂಚೆ, ಹಾಸನ ಜಿಲ್ಲೆ.

**ಪ್ರಕರಣದ ಮುಖ್ಯಾಂಶಗಳು:**

ಫಿರ್ಯಾದುದಾರರು ದಿನಾಂಕ:15–8–2009 ರಂದು ಬೆಳಿಗ್ಗೆ 7–45 ಗಂಟೆ ಸಮಯಕ್ಕೆ ಅವರ ಠಾಣಾ ಸಿಬ್ಬಂದಿಯವರೊಂದಿಗೆ ಕೂಡಿಕೊಂಡು ಇಲಾಖಾ ಜೀಪಿನಲ್ಲಿ ಮಂಗಳೂರು ನಗರದ ಪಂಪುವೆಲ್ ಪರಿಸರದಲ್ಲಿ ಗಸ್ತು ಕರ್ತವ್ಯದಲ್ಲಿರುವಾಗ ವಾಹನ ಸಂ:KA-21-647 ನಂಬರಿನ ಬಿಳಿ ಬಣ್ಣದ ಅಂಬಾಸಿಡರ್ ಕಾರಿನಲ್ಲಿ ಗೋವಾ ರಾಜ್ಯದಲ್ಲಿ ತಯಾರಾದ ಮದ್ಯವನ್ನು ಕಂಕನಾಡಿ ರೈಲ್ವೆ ನಿಲ್ದಾಣದಿಂದ ಪಂಪುವೆಲ್ ಮೂಲಕ ಕೇರಳ ರಾಜ್ಯಕ್ಕೆ ಅಕ್ರಮವಾಗಿ ಸಾಗಾಟ ಮಾಡುತ್ತಿರುವ ಬಗ್ಗೆ ದೊರೆತ ಖಚಿತ ಮಾಹಿತಿಯಂತೆ ಇಬ್ಬರು ಪಂಚರನ್ನು ಕರೆದುಕೊಂಡು ಪಂಪುವೆಲ್‌ನ ವಲೇರಿಯನ್ ವೈನ್ ಶಾಪ್ ಮುಂಭಾಗದಲ್ಲಿರುವ ಸಾರ್ವಜನಿಕ ಬಸ್ ನಿಲ್ದಾಣದ ಬಳಿ ವಾಹನಗಳನ್ನು ತಪಾಸಣೆ ನಡೆಸುತ್ತಿರುವಾಗ ದೊರೆತ ಖಚಿತ ವರ್ತಮಾನದ ಮಾಹಿತಿಯಂತೆ ಅಂಬಾಸಿಡರ್ ಕಾರು ಸಂ:KA-21-647 ಬರುತ್ತಿರುವುದನ್ನು ಕಂಡು ನಿಲ್ಲಿಸಲು ಸೂಚನೆ ನೀಡಿದಾಗ ಕಾರಿನ ಚಾಲಕ ಕಾರನ್ನು ನಿಲ್ಲಿಸಿ ಚಾಲಕನ ಎಡಭಾಗದಲ್ಲಿದ್ದ ಇನ್ನೊಬ್ಬ ವ್ಯಕ್ತಿ ಸೇರಿ ಓಡಲು ಪ್ರಯತ್ನಿಸಿದ್ದು, ಸಿಬ್ಬಂಧಿಯವರು ಮೂರು ಕಡೆಯಿಂದ ಸುತ್ತುವರಿದು ಇಬ್ಬರನ್ನು ಹಿಡಿದು ಅವರ ವಶಕ್ಕೆ ತೆಗೆದು ಕೊಂಡಿರುತ್ತಾರೆ. ಸದ್ರಿ ವ್ಯಕ್ತಿಗಳನ್ನು ವಿಚಾರಿಸಲಾಗಿ ಕಾರಿನ ಚಾಲಕ ಹಾಗೂ ಮಾಲೀಕನಾದ ನಾರಾಯಣ ,ಬಿನ್:ವೆಂಕಪ್ಪ ಮೂಲ್ಯ ,ವಾಸ:ಮೈಂದಾಳ ಮನೆ, ನಾವೂರು ಗ್ರಾಮ & ಅಂಚೆ, ಬಂಟ್ವಾಳ ತಾಲೂಕು ಮತ್ತು ಚಾಲಕನ ಪಕ್ಕದ ಸೀಟಿನಲ್ಲಿ ಕುಳಿತ್ತಿದ್ದ ವ್ಯಕ್ತಿಯ ಹೆಸರು ಕೆ.ಎಂ.ಪ್ರವೀಣ ಬಿನ್:ದಿ:ಮಲ್ಲೇಗೌಡ, ಕೆನಗನ ಹಳ್ಳಿ, ಹೆತ್ತೂರು ಹೋಬಳಿ, ನಿಡಿಗೇರಿ ಅಂಚೆ, ಹಾಸನ ಜಿಲ್ಲೆ ಎಂದು ತಿಳಿಸಿರುತ್ತಾನೆ. ಹಾಗೂ ಇನ್ನಿತರು ಓಡಿ ಪರಾರಿಯಾಗಿರುತ್ತಾರೆ. ಕಾರನ್ನು ನೋಡಲಾಗಿ ಹಾಗೂ ಕಾರಿನೊಳಗೆ ಏನಿದೆ ಎಂದು ಕೇಳಲಾಗಿ ಕಾರಿನಲ್ಲಿ ಅಕ್ರಮವಾಗಿ ಗೋವಾದಲ್ಲಿ ತಯಾರಿಸಿರುವ ಮದ್ಯದ ಬಾಟಲಿಗಳನ್ನು ಸಾಗಾಟ ಮಾಡಿರುವುದಾಗಿ ಚಾಲಕನು ತಿಳಿಸಿರುತ್ತಾನೆ. ಪಂಚರ ಸಮಕ್ಷಮ ಕಾರಿನ ಡಿಕ್ಕಿಯನ್ನು ನೋಡಲಾಗಿ ಡಿಕ್ಕಿಯಲ್ಲಿ ಮದ್ಯದ ಬಾಟಲಿಗಳನ್ನು ಇಡಲಾಗಿದ್ದು, ನದನ್ ಮಾಲ್ಟ್ ವಿಸ್ಕಿ 750 ಎಂಎಲ್‌ನ 72 ಸೀಸೆಗಳಂತೆ ಒಟ್ಟು 54 ಲೀಟರು ಮದ್ಯ ಮತ್ತು ಪೀಟರ್ ಪೋರ್ಟ್ ಟ್ರಿಬಲ್ ಎಕ್ಸ್ ರಂ 750 ಎಂ ಎಲ್ ನ 12 ಸೀಸೆಗಳಂತೆ ಒಟ್ಟು 9.000 ಲೀಟರು ಮದ್ಯವು ಕಂಡುಬಂದಿರುತ್ತದೆ. ಸದ್ರಿ ಕಾರಿನ ಚಾಲಕನಲ್ಲಿ ಸದ್ರಿ ಮದ್ಯವನ್ನು ಎಲ್ಲಿಂದ ತಂದದ್ದು ಎಂಬ ಬಗ್ಗೆ ವಿಚಾರಣೆ ಮಾಡಲಾಗಿ ತಾವುಗಳು ಗೋವಾ ರಾಜ್ಯದಿಂದ ರೈಲಿನ ಮುಂಖಾತರ ತಂದು ಮಂಗಳೂರು ಕಂಕನಾಡಿ ರೈಲ್ವೆ ನಿಲ್ದಾಣದಲ್ಲಿ ಇಳಿದು ಹೆಚ್ಚಿನ ಹಣ ಸಂಪಾದಿಸುವ ಪ್ರಯುಕ್ತ ಕೇರಳ ರಾಜ್ಯಕ್ಕೆ ಸಾಗಾಟ ಮಾಡುವ ಉದ್ದೇಶದಿಂದ ಕೊಂಡೊಯ್ಯುವುದಾಗಿ ತಿಳಿಸಿರುತ್ತಾರೆ. ಸದ್ರಿ ಅಂಬಾಸಿಡರ್ ಕಾರನ್ನು ಪರಿಶೀಲಿಸಿದಾಗ ಅದು ಬಿಳಿ ಬಣ್ಣದ ಅಂಬಾಸಿಡರ್ ನೋವಾ ಕಾರಾಗಿದ್ದು, ಇದರ ನೊಂದಾಣಿ ಸಂ:KA-21-647 ಆಗಿದ್ದು ,ಹಿಂಬದಿಯ ಗ್ಲಾಸಿನಲ್ಲಿ ಭವ್ಯ, ಅಕ್ಷತಾ ಮತ್ತು ಭರತ್ ಅಂತ ಇಂಗ್ಲೀಷ್‌ನಲ್ಲಿ ಬರೆದಿರುತ್ತದೆ.ಇದರ ಚಾಸೀಸ್ ನಂ:111–654969 ಮತ್ತು ಇಂಜಿನ್ ನಂ:6ED072654 ಆಗಿರುತ್ತದೆ. ಸದ್ರಿ ಮದ್ಯದಿಂದ ರಾಸಾಯನಿಕ ಪರೀಕ್ಷೆಗಾಗಿ ನದನ್ ಮಾಲ್ಟ್ ವಿಸ್ಕಿಯಿಂದ ಮತ್ತು ಪೀಟರ್ ಪೋರ್ಟ್ ಟ್ರಿಬಲ್ ಎಕ್ಸ್ ರಂ ನಿಂದ ತಲಾ ಒಂದು ಬಾಟಲಿಯನ್ನು ತೆಗೆದು ಬಾಟಲಿಯ ಮುಚ್ಚಳಕ್ಕೆ ಬಿಳಿಯ ಬಟ್ಟೆ ಸುತ್ತಿ ಅದಕ್ಕೆ ಅರಗು ಸೀಲು ಮಾಡಿ ಪಂಚರ ಸಹಿಯುಳ್ಳ ಬಿಳಿ ಚೀಟಿಯನ್ನು ಸ್ಯಾಂಪಲ್ ಬಾಟಲಿಗಳಿಗೆ ಅಂಟಿಸಲಾಯಿತು.ಮಾದರಿ ಸೀಸೆಗಳಿಗೆ ಕ್ರಮವಾಗಿ ಎ ಮತ್ತು ಬಿ ಎಂದು ಹೆಸರು ಕೊಡಲಾಯಿತು. ನಂತರ ಅರೋಪಿಗಳಾದ ನಾರಾಯಣ ಮತ್ತು ಪ್ರವೀಣ್ ಕೆ. ಎಂಬವರನ್ನು ಸ್ಥಳದಲ್ಲಿ ದಸ್ತಗಿರಿ ಮಾಡಿ ಅಕ್ರಮವಾಗಿ ಸಾಗಾಟಕ್ಕೆ ಬಳಸಿದ ಅಂಬಾಸಿಡರ್ ಕಾರು ಹಾಗೂ ಗೋವಾ ಮದ್ಯವನ್ನು ಸ್ವಾಧೀನಕ್ಕೆ ತೆಗೆದುಕೊಂಡು ಮಹಜರನ್ನು ಸ್ಥಳದ ಲ್ಲಿಯೇ ಬರೆದು, ಮಹಜರಿನಲ್ಲಿ ಸ್ಥಳ ಚೆಕ್ ಬಂಧಿ ನಮೂದಿಸಿ, ಮಹಜರಿಗೆ ಪಂಚರ ಮತ್ತು ಸಿಬ್ಬಂಧಿಯವರ ಸಹಿ ಪಡೆದು ಅರೋಪಿಗಳ ವಿರುದ್ದ ತಕ್ಷೀರು ಸಂ:6/2009 ದಿ:15–8–2009 ರಂದು ಪ್ರಕರಣವನ್ನು ನೊಂದಾಯಿಸಿ ತಮ್ಮ ಮೇಲಾಧಿಕಾರಿಗಳಿಗೆ ಹಾಗೂ ಮಾನ್ಯ ನ್ಯಾಯಾಲಯಕ್ಕೆ ಮತ್ತು ಈ ಪ್ರಾಧಿಕಾರಕ್ಕೆ ವರದಿ ಸಲ್ಲಿಸಿರುತ್ತಾರೆ.

ಪೊಲೀಸ್ ನಿರೀಕ್ಷಕರು, ಅಬಕಾರಿ ಜಾರಿ ಮತ್ತು ಲಾಟರಿ ನಿಷೇಧ ದಳ ಬಂದರು, ಮಂಗಳೂರು ಇವರು ದಿ:16–8–2009ರ ವರದಿಯಲ್ಲಿ ತಕ್ಷೀರಿನಲ್ಲಿ ವಶಪಡಿಸಿಕೊಂಡ ಅಂಬಾಸಿಡರ್ ಕಾರು ಹಾಗೂ ಮದ್ಯವನ್ನು ಮುಂದಿನ ಸೂಕ್ತ ಕ್ರಮಕ್ಕಾಗಿ ಅಬಕಾರಿ ನಿರೀಕ್ಷಕರು, ಮಂಗಳೂರು ದಕ್ಷಿಣ ವಲಯ–2 ಇವರಿಗೆ ಹಸ್ತಾಂತರಿಸಲು ಈ ಪ್ರಾಧಿಕಾರದಿಂದ ಅನುಮತಿ ಕೋರಿರುವ ಮೇರೆಗೆ ಈ ಪ್ರಾಧಿಕಾರದ ಅದೇಶ ಸಂ: ಎಸ್‌ಡಿಕೆ: 68: ಡಿಟಿಸಿಆರ್: 2009–10 ದಿ:25–9–2009ರ ಅದೇಶದಲ್ಲಿ ತಕ್ಷೀರಿನಲ್ಲಿ ವಶಪಡಿಸಿಕೊಂಡ ಸೊತ್ತುಗಳ ಪೂರ್ಣ ದಾಖಲಾತಿಗಳೊಂದಿಗೆ ಅಬಕಾರಿ ನಿರೀಕ್ಷಕರು, ಮಂಗಳೂರು ದಕ್ಷಿಣ ವಲಯ–2 ಇವರಿಗೆ ಹಸ್ತಾಂತರಿಸಲು ಅನುಮತಿಯನ್ನು ನೀಡಲಾಗಿರುತ್ತದೆ.

ಈ ಪ್ರಾಧಿಕಾರದಿಂದ ದಿ:17–2–2010ರಂದು ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಪುತ್ತೂರು ಇವರಿಗೆ ತಕ್ಷೀರಿನಲ್ಲಿ ವಶಪಡಿಸಿಕೊಂಡ ಅಂಬಾಸಿಡರ್ ಕಾರು ಸಂ:KA-21-647 ರ ಬಿ ಎಕ್ಸ್‌ಟ್ರಾಕ್ಟ್ ವರದಿಯನ್ನು ಸಲ್ಲಿಸಲು ಹಾಗೂ ಆರ್.ಸಿ ಮಾಲೀಕತ್ವ ವರ್ಗಾವಣೆ ಯನ್ನು ತಡೆಹಿಡಿಯಬೇಕಾಗಿ ಕೋರಲಾಗಿತ್ತು.

ತಕ್ಷೀರಿನಲ್ಲಿ ದಸ್ತಗಿರಿಯಾದ ಅರೋಪಿಗಳಾದ ನಾರಾಯಣ ಮೂಲ್ಯ ಮತ್ತು ಕೆ.ಎಂ.ಪ್ರವೀಣ್ ಇವರಿಗೆ ಈ ಪ್ರಾಧಿಕಾರದಿಂದ ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 43 ಬಿ ಪ್ರಕಾರ ಕಾರಣ ಕೇಳಿ ನೋಟಿಸನ್ನು ದಿ:24–4–2010ರಂದು ನೊಂದಾಣಿ ಅಂಚೆಯ ಮೂಲಕ ನೀಡಲಾಗಿದ್ದು, ಸದ್ರಿ ನೋಟಿಸುಗಳು ಜ್ಯಾರಿಯಾಗಿ, ಅಂಚೆ ಸ್ವೀಕೃತಿ ಈ ಪ್ರಾಧಿಕಾರದಲ್ಲಿ ಸ್ವೀಕೃತವಾಗಿರುತ್ತದೆ. ಆದರೆ ವಾಹನದ ಮಾಲೀಕರಾಗಲಿ, ಅವರ ಪರ ವಕೀಲರಾಗಲಿ ಮತ್ತು ತಕ್ಷೀರಿನಲ್ಲಿ ದಸ್ತಗಿರಿಯಾದ ಆರೋಪಿಯಾಗಲಿ ಈ ಪ್ರಾಧಿಕಾರದ ಮುಂದೆ ಹಾಜರಾಗಿ ವಾಹನದ ಬಿಡುಗಡೆ ಪಡೆಯಲು ಯಾವುದೇ ಅರ್ಜಿಯನ್ನು ಇದುವರೆಗೂ ಸಲ್ಲಿಸಿರುವುದಿಲ್ಲ.

ಅಬಕಾರಿ ನಿರೀಕ್ಷಕರು,ಮಂಗಳೂರು ದಕ್ಷಿಣ ವಲಯ–2 ಮಂಗಳೂರು ಇವರ ತನಿಖಾ ವರದಿ ಸಂ:ಎಂಎಸ್‌ಆರ್–2/ 21/2009–10 ದಿ:29–3–2010ರ ತನಿಖಾ ವರದಿಯಲ್ಲಿ ಪೊಲೀಸ್ ನಿರೀಕ್ಷಕರು, ವಿಶೇಷ ಪೊಲೀಸ್ ಠಾಣೆ,ಜಾರಿ ಮತ್ತು ಲಾಟರಿ ನಿಷೇಧ ದಳ, ಮಂಗಳೂರು ಇವರು ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ದ.ಕ ಜಿಲ್ಲೆ, ಮಂಗಳೂರು ಇವರಿಂದ ಪಡೆದು ಸಲ್ಲಿಸಿದ್ದ, ಅಂಬಾಸಿಡರ್ ಕಾರು ಸಂ:KA-21-0647 ರ ಬಿ ಎಕ್ಸ್ ಟ್ರಾಕ್ಟ್ ವರದಿಯನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುತ್ತಾರೆ. ಬಿ ಎಕ್ಸ್‌ಟ್ರಾಕ್ಟ್ ವರದಿಯಲ್ಲಿ ವಾಹನದ ನೊಂದಾಣಿ ಮಾಲೀಕ ಶ್ರೀ.ನಾರಾಯಣ ಮೂಲ್ಯ ಬಿನ್:ವೆಂಕಪ್ಪ ಮೂಲ್ಯ, ಮೈಂದಾಳ ಹೌಸ್,ನಾವೂರು, ಬಂಟ್ವಾಳ ಹಾಗೂ ವಾಹನದ ಚಾಸೀಸ್ ನಂ:111654969 ಮತ್ತು ಇಂಜಿನ್ ನಂ:6ED072654 ಆಗಿರುತ್ತದೆ. ತಕ್ಷೀರಿನಲ್ಲಿ ವಶಪಡಿಸಿಕೊಂಡ ಮದ್ಯದ ರಾಸಾಯನಿಕ ಕೆಮಿಕಲ್ ವರದಿಯನ್ನು ಪೊಲೀಸ್ ಉಪ ನಿರೀಕ್ಷಕರು, ವಿಶೇಷ ಪೊಲೀಸ್ ಠಾಣೆ,ಜಾರಿ ಮತ್ತು ಲಾಟರಿ ನಿಷೇಧ ದಳ, ಮಂಗಳೂರು ಇವರ ಮೂಲಕ ಪಡೆಯಲಾಗಿದ್ದು, ಕರ್ನಾಟಕ ಸರ್ಕಾರ ಸಹಾಯಕ ರಾಸಾಯನಿಕ ವಿಶ್ಲೇಷಕರ ಕಛೇರಿ,ಚಿಕ್ಕಮಗಳೂರು ಇವರ ವರದಿ ಸಂ:05–2 ದಿ:5–2–2010ರ ವರದಿಯಲ್ಲಿ ತಕ್ಷೀರಿನಲ್ಲಿ ತೆಗೆದ ಸ್ಯಾಂಪಲ್‌ಗಳ ಮದ್ಯದಲ್ಲಿ ಕ್ರಮವಾಗಿ 41.3% ಮತ್ತು 42.1% ಮದ್ಯದ ಮದ್ಯಸಾರ ಇರುವುದಾಗಿ ದೃಡೀಕರಣ ಪತ್ರ ನೀಡಿರುತ್ತಾರೆ. ಹಾಗೂ ಪ್ರಕರಣದ ಕೇಸು ಡೈರಿ, ಪ್ರಥಮ ಮಾಹಿತಿ ವರದಿ, ಮಹಜರು ಹಾಗೂ ಇನ್ನಿತರ ದಾಖಲಾತಿಗಳನ್ನು ಸಲ್ಲಿಸಿದ್ದು ಸದ್ರಿ ಮೊದಕ್ದಮೆಯಲ್ಲಿ ವಶಪಡಿಸಿಕೊಂಡ ಅಂಬಾಸಿಡರ್ ಕಾರಿನ ಮಾಲೀಕನೇ ಅಕ್ರಮವಾಗಿ ಮದ್ಯ ಸಾಗಾಟ ಮಾಡಿರುವುದು ಖಚಿತವಾಗಿರುವುದರಿಂದ ತಕ್ಷೀರಿನಲ್ಲಿ ವಶಪಡಿಸಿಕೊಂಡ ಮದ್ಯ ಹಾಗೂ ಅಂಬಾಸಿಡರ್ ಕಾರನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಮದ್ಯವನ್ನು ನಾಶಪಡಿಸಲು ಆದೇಶ ನೀಡಬೇಕೆಂದು ಅವರ ತನಿಖಾ ವರದಿಯಲ್ಲಿ ಶಿಫಾರಸ್ಸು ಮಾಡಿರುತ್ತಾರೆ.

ಅಬಕಾರಿ ನಿರೀಕ್ಷಕರ ತನಿಖಾ ವರದಿಯನ್ನು ಆಧರಿಸಿ ತಕ್ಷೀರಿನಲ್ಲಿ ವಶಪಡಿಸಿಕೊಂಡ 750 ಎಂ ಎಲ್ ನ ಗೋವಾ ನಿರ್ಮಿತ ನಾದನ್ ಮಾಲ್ಟ್ ವಿಸ್ಕಿ 72 ಪ್ಲಾಸ್ಟಿಕ್ ಸೀಸೆಗಳ ಪೈಕಿ ರಾಸಾಯನಿಕ ವಿಶ್ಲೇಷಣೆಗೆ ತೆಗೆದ 1 ಬಾಟಲಿಯನ್ನು ಹೊರತುಪಡಿಸಿ ಉಳಿದ 71 ಪ್ಲಾಸ್ಟಿಕ್ ಬಾಟಲಿಗಳಲ್ಲಿ ಒಟ್ಟು 53.250 ಲೀಟರು ಮದ್ಯ ಮತ್ತು 750 ಎಂ ಎಲ್ ನ ಗೋವಾ ನಿರ್ಮಿತ ಫೀಟರ್ ಪೋರ್ಟ್ ತ್ರಿಬಲ್ ಎಕ್ಸ್ ರಮ್ 12 ಪ್ಲಾಸ್ಟಿಕ್ ಸೀಸೆಗಳ ಪೈಕಿ ರಾಸಾಯನಿಕ ವಿಶ್ಲೇಷಣೆಗೆ ತೆಗೆದ 1 ಬಾಟಲಿಯನ್ನು ಹೊರತುಪಡಿಸಿ ಉಳಿದ 11 ಪ್ಲಾಸ್ಟಿಕ್ ಬಾಟಲಿಗಳಲ್ಲಿ ಒಟ್ಟು 8.250 ಲೀಟರು ಮದ್ಯವನ್ನು ಈ ಪ್ರಾಧಿಕಾರದ ಆದೇಶ ಸಂ: ಎಸ್‌ಡಿಕೆ:68: ಡಿಟಿಸಿಆರ್:2009–10 ದಿ:28–5–2010ರ ಆದೇಶದಲ್ಲಿ ಕರ್ನಾಟಕ ಅಬಕಾರಿ ಕಾಯಿದೆ 1965 ರ ಕಲಂ 43 ಸಿ ರನ್ವಯ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಮಹಜರು ಜರುಗಿಸಿ ಮದ್ಯವನ್ನು ಪ್ಲಾಸ್ಟಿಕ್ ಬಾಟಲಿಗಳ ಸಮೇತ ನಾಶ ಪಡಿಸಲು ಆದೇಶಿಸಲಾಗಿರುತ್ತದೆ.

ಮೊಕದ್ದಮೆಯಲ್ಲಿ ವಶಪಡಿಸಿಕೊಳ್ಳಲಾಗಿರುವ ಅಂಬಾಸಿಡರ್ ಕಾರು ಸಂ:KA-21-647 ಇದರ ಮುಟ್ಟುಗೋಲು ನಡವಳಿಗೆ ಸಂಬಂಧಿಸಿದಂತೆ ಸಾಕ್ಷಿ ವಿಚಾರಣೆಗಾಗಿ ಹಾಜರಾತಿ ನೋಟಿಸುಗಳನ್ನು ಸಾಕ್ಷಿದಾರರಿಗೂ ಹಾಗೂ ವಾಹನದ ಮಾಲೀಕರಿಗೆ ನೊಂದಾವಣೆ ಅಂಚೆ ಮೂಲಕ ನೀಡಲಾಗಿದ್ದರೂ ವಾಹನದ ಮಾಲೀಕರು ಪ್ರಾಧಿಕಾರದ ಮುಂದೆ ಹಾಜರಾಗಿ ಯಾವುದೇ ಸಾಕ್ಷಿ ವಿಚಾರಣೆ ಹೇಳಿಕೆಯನ್ನು ನೀಡಿರುವುದಿಲ್ಲ.

ಪ್ರಕರಣದ ವಿಚಾರಣೆಯನ್ನು ಆರಂಭಿಸಿ ಈ ಪ್ರಕರಣದಲ್ಲಿ ಈ ಕೆಳಗಿನಂತೆ ವಿವಾದಾಂಶಗಳು ಉದ್ಭವಿಸುತ್ತದೆ.

**1) ಮೊದಲನೇ ವಿವಾದಾಂಶ:** ದಿ: 15–8–2009 ರಂದು ಅಂಬಾಸಿಡರ್ ಕಾರು ಸಂ: KA-21-647 ರಲ್ಲಿ ವಾಹನದ ಮಾಲೀಕರ ತಿಳುವಳಿಕೆಯಿಂದಲೇ ಅಕ್ರಮವಾಗಿ ಮದ್ಯ ಸಾಗಾಣಿಕೆಯಾಗಿದೆಯೇ? ಮತ್ತು ವಾಹನವನ್ನು ಕರ್ನಾಟಕ ಅಬಕಾರಿ ಕಾಯಿದೆ ಮತ್ತು ನಿಯಮಗಳ ರೀತ್ಯಾ ಉಲ್ಲಂಘನೆಗೆ ಬಳಸಲಾಗಿದೆಯೇ?

**2) ಎರಡನೇ ವಿವಾದಾಂಶ:** ಸದರಿ ವಾಹನದಲ್ಲಿ ಅಕ್ರಮವಾಗಿ ಮದ್ಯ ಸಾಗಾಣಿಕೆಯಾಗಿರುವುದರ ಬಗ್ಗೆ ವಾಹನ ಮಾಲೀಕರಿಗೆ ಅರಿವಿಲ್ಲದಂತೆ ಮತ್ತು ಅವರು ಶಾಮೀಲಾಗದೆ ನಡೆದಿದೆ ಹಾಗೂ ಇದರ ಬಗ್ಗೆ ಅವರು ಸಾಕಷ್ಟು ಮುಂಜಾಗ್ರತ ಕ್ರಮವನ್ನು ಕೈಗೊಳ್ಳಲಾಗಿತ್ತು ಎಂಬ ಅಂಶವನ್ನು ಆರೋಪಿಗಳು ಮತ್ತು ವಾಹನ ಮಾಲೀಕರು ಈ ಪ್ರಾಧಿಕಾರಕ್ಕೆ ತೃಪ್ತಿಕರವಾಗಿ ನಿರೂಪಿಸಿರುತ್ತಾರೆಯೇ? ಅಥವಾ ಇಲ್ಲವೇ?

**3) ಮೂರನೇ ವಿವಾದಾಂಶ:** ಜಪ್ತುಪಡಿಸಲಾದ ವಾಹನವನ್ನು ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿದೆಯೇ ಅಥವಾ ಇಲ್ಲವೇ?

ಒಂದನೇ ಅಂಶವನ್ನು ಗುಣಾತ್ಮಕವಾಗಿ, ಎರಡನೇ ಅಂಶವನ್ನು ನಕಾರಾತ್ಮಕವಾಗಿ ಮತ್ತು ಮೂರನೇ ಅಂಶವನ್ನು ಅಂತಿಮ ಆದೇಶದಂತೆ.

**ಪ್ರಾ.ಸ–1:–**

ಶ್ರೀ.ಬಿ.ಜಿ.ಆಚಾರ್ ,ಪೊಲೀಸ್ ನಿರೀಕ್ಷಕರು, ಅಬಕಾರಿ ಜಾರಿ ಮತ್ತು ಲಾಟರಿ ನಿಷೇಧ ದಳ, ಮಂಗಳೂರುರವರು ಪ್ರಕರಣದ ಪಿರ್ಯಾದುದಾರರಾಗಿದ್ದು ಇವರು ದಿನಾಂಕ:15–6–2010 ರಂದು ಈ ಪ್ರಾಧಿಕಾರದ ಮುಂದೆ ಹಾಜರಾಗಿ ಸಾಕ್ಷಿಯನ್ನು ನೀಡಿರುತ್ತಾರೆ. ತಾನು ಜುಲೈ–2009ರಿಂದ ಅಬಕಾರಿ ಜಾರಿ ಮತ್ತು ಲಾಟರಿ ನಿಷೇಧ ದಳ, ವಿಶೇಷ ಪೊಲೀಸ್ ಠಾಣೆ ಇಲ್ಲಿ ಪೊಲೀಸ್ ನಿರೀಕ್ಷಕನಾಗಿ ಕರ್ತವ್ಯ ನಿರ್ವಹಿಸುತ್ತಿದ್ದು, ತಾನು ದಿ:15–8–2009ರಂದು ಬೆಳಿಗ್ಗೆ ತಮ್ಮ ಇಲಾಖಾ ಜೀಪಿನಲ್ಲಿ ಸಿಬ್ಬಂಧಿಗಳಾದ ರಾಜೇಶ್ ,ಪ್ರದೀಪ ಮತ್ತು ಚಾಲಕ ರಾಜೇಶ್ ಡ್ಯಾನಿ ಇವರನ್ನು ಕರೆದುಕೊಂಡು ಮಂಗಳೂರು ನಗರದ ಪಂಪುವೆಲ್ ಪರಿಸರದಲ್ಲಿ ರೌಂಡ್ಸ್‌ನಲ್ಲಿದ್ದಾಗ ಮಧ್ಯಾಹ್ನ ವಲೇರಿಯನ್ ವೈನ್ ಶಾಪ್ ಬಳಿ ವಾಹನಗಳ ತಪಾಸಣೆ ನಡೆಸುತ್ತಿದ್ದಾಗ, ಮಂಗಳೂರು– ಕಂಕನಾಡಿ ರೈಲ್ವೆ ನಿಲ್ದಾಣದ ಕಡೆಯಿಂದ ಕೇರಳ ಕಡೆಗೆ ಬರುತ್ತಿದ್ದ ಬಿಳಿ ಅಂಬಾಸಿಡರ್ ಕಾರು ಸಂ:KA-21-647 ಕಾರನ್ನು ನಿಲ್ಲಿಸಿದಾಗ ಚಾಲಕನು ಮತ್ತು ಆತನ ಪಕ್ಕದಲ್ಲಿದ್ದ ವ್ಯಕ್ತಿಗಳು ಓಡಿ ಪರಾರಿಯಾಗಲು ಯತ್ನಿಸಿದಾಗ ಅವರನ್ನು ತಾವು ಹಿಡಿದುಕೊಂಡೆವು. ಪಂಚರ ಸಮಕ್ಷಮ ತಾವು ಅವರನ್ನು ವಿಚಾರಿಸಿದಾಗ ಆತನು ಕಾರಿನಲ್ಲಿ ಗೋವಾದಿಂದ ಅಕ್ರಮವಾಗಿ ಮದ್ಯವನ್ನು ಕೇರಳ ರಾಜ್ಯಕ್ಕೆ ಹೆಚ್ಚಿನ ಲಾಭಗಳಿಸುವ ಉದ್ದೇಶದಿಂದ ತೆಗೆದು ಹೋಗುತ್ತಿದ್ದು ಆತನ ಹೆಸರು ನಾರಾಯಣ ಮತ್ತೊಬ್ಬನ ಹೆಸರು ಪ್ರವೀಣ ಎಂದು ಹೇಳಿದರು. ನಂತರ ಕಾರಿನಲ್ಲಿದ್ದ ಸೊತ್ತುಗಳನ್ನು ಪರಿಶೀಲಿಸಿದಾಗ 72 ಬಾಟಲು ನದನ್ ವಿಸ್ಕಿ ತಲಾ 750 ಎಂ ಎಲ್ ಹೊಂದಿದ್ದ ಬಾಟಲಿಗಳು ಇದ್ದವು. ತಾವು ಪಂಚರ ಸಮಕ್ಷಮ ವಿಸ್ಕಿಯ ಬಾಟಲಿಗಳಿಂದ ಸ್ಯಾಂಪಲ್‌ಗಾಗಿ 1 ಬಾಟಲಿಯನ್ನು ಮತ್ತು ರಮ್ ನ ಬಾಟಲಿಗಳಿಂದ 1 ಬಾಟಲ್ ತೆಗೆದು ಅದಕ್ಕೆ ಬಿಳಿ ಬಟ್ಟೆ ಸುತ್ತಿ ಸೀಲು ಹಾಕಿ ಅದಕ್ಕೆ ಎ ಮತ್ತು ಬಿ ಎಂದು ಗುರುತು ನಮೂದಿಸಿ ಪಂಚರ ಸಹಿಯುಳ್ಳ ಬಿಳಿ ಚೀಟಿಗಳನ್ನು ಅಂಟಿಸಿದೆವು. ಕಾರಿನ ಮತ್ತು ಮದ್ಯದ ಮೌಲ್ಯ ಒಟ್ಟು ಮೌಲ್ಯವನ್ನು ತಮ್ಮ ಮಹಜರಿನಲ್ಲಿ ನಮೂದಿಸಿದ್ದೇವೆ. ತಾವು ಸ್ವಾಧೀನ ಪಡಿಸಿದ ವಸ್ತುಗಳ ಬಗ್ಗೆ ಸ್ಥಳದಲ್ಲಿ ವಿವರವಾದ ಮಹಜರು ಮಾಡಿದ್ದು, ಅದನ್ನು ಈಗ ನೋಡುತ್ತಿದ್ದು, ಅದು ನಿಶಾನೆ ಪಿ–1ಎಂದು, ಅದರಲ್ಲಿರುವ ತನ್ನ ಸಹಿ ಇದ್ದು ಅದು ನಿಶಾನೆ ಪಿ–1 ಎ ಗುರುತಿಸಿದೆ. ಸದ್ರಿ ಅಂಬಾಸಿಡರ್ ಕಾರಿನ ಚಾಲಕ ನಾರಾಯಣ ಆಗಿರುತ್ತಾರೆ. ತಾವು ಅಮಾನತು ಪಡಿಸಿದ ಮದ್ಯಕ್ಕೆ ಯಾವುದೇ ಪರವಾನಿಗೆ ಇರಲಿಲ್ಲ. ನಂತರ ತಾನು ಅರೋಪಿಗಳನ್ನು ಮತ್ತು ವಶಪಡಿಸಿದ ಸೊತ್ತು ಸಮೇತ ಠಾಣೆಗೆ ಬಂದು ಒಂದು ವಿವರವಾದ ವರದಿ ತಯಾರಿಸಿದೆ. ಸದ್ರಿ ವರದಿ ಆಧಾರದಲ್ಲಿ ಪ್ರಕರಣ ನೊಂದಾಯಿಸಲು ತನ್ನ ವರದಿಯನ್ನು ಠಾಣಾಧಿಕಾರಿ ಶ್ರೀಮತಿ. ಕಮಲಾ ರವರಿಗೆ ನೀಡಿರುತ್ತೇನೆ. ಅವರು ತಮ್ಮ ಠಾಣೆಯಲ್ಲಿ ಕ್ರೈಂ ನಂ:6/2009 ರಂತೆ ಪ್ರ.ಮಾ.ವ ತಯಾರಿಸಿರುತ್ತಾರೆ. ತಾನು ತಯಾರಿಸಿದ ವರದಿ ಈಗ ನೋಡುತ್ತಿದ್ದು ಅದು ನಿಶಾನೆ ಪಿ–2 ಎಂದು ,ಅದರಲ್ಲಿರುವ ತನ್ನ ಸಹಿಯನ್ನು ನಿಶಾನೆ ಪಿ–2 ಎ ಎಂದು ಗುರುತಿಸ ಲಾಯಿತು. ತನ್ನ ವರದಿ

ಆಧಾರದಲ್ಲಿ ತಯಾರಿಸಿದ ಪ್ರಥಮ ಮಾಹಿತಿ ವರದಿ ನಿಶಾನೆ ಪಿ–2 ರಲ್ಲಿದೆ. ಈ ಪ್ರಕರಣದಲ್ಲಿ ಮುಂದಿನ ತನಿಖೆಯನ್ನು ಶ್ರೀಮತಿ.ಕಮಲರವರು ನಡೆಸಿ ಸಾಕ್ಷಿ ಗಳ ಹೇಳಿಕೆ ಪಡೆದುಕೊಂಡಿರುತ್ತಾರೆ. ಶ್ರೀಮತಿ.ಕಮಲಾ ರವರಿಂದ ತಾನು ಈ ಪ್ರಕರಣದಲ್ಲಿ ಮುಂದಿನ ತನಿಖೆ ಕೈಗೆತ್ತಿಕೊಂಡು ದಿ:10–11–2009ರಂದು ಪ್ರಕರಣ ದಲ್ಲಿ ವಶಪಡಿಸಿದ ಸೊತ್ತುಗಳನ್ನು ಮುಟ್ಟುಗೋಲು ಹಾಕಿಕೊಳ್ಳುವ ಬಗ್ಗೆ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್ ದಕ ಜಿಲ್ಲೆ ಮಂಗಳೂರು ಇವರಿಗೆ ಸೊತ್ತುಗಳನ್ನು ಹಸ್ತಾಂತರ ಪಡಿಸುವರೇ ವರದಿ ಮುಖೇನಾ ಅದೇಶ ಕೋರಿದ್ದು,ಈ ಬಗ್ಗೆ ಸ್ವೀಕೃತಿ ಪಡೆದು ಠಾಣೆಯಲ್ಲಿ ವರದಿ ಮಾಡಲು ಪಿಸಿ 1009ರಿಗೆ ನಿರ್ದೇಶಿಸಿರುತ್ತೇನೆ.ದಿ:30–11–2009 ರಂದು ತಜ್ಞರ ಪರೀಕ್ಷೆಗೆ ಇರಿಸಿದ ಸೊತ್ತುಗಳನ್ನು ಸೊತ್ತು ಪಟ್ಟಿ ತಯಾರಿಸಿ ರಾಸಾಯನಿಕ ವಿಶ್ಲೇಷಣೆಗಾಗಿ ಚಿಕ್ಕಮಗಳೂರು ಇಲ್ಲಿಗೆ ಮೇಲಾಧಿಕಾರಿಗಳ ಮುಖಾಂತರ ಪಿಸಿ–999 ಲೋಕನಾಥರವರ ಮುಖಾಂತರ ಕಳುಹಿಸಿ ಕೊಟ್ಟಿರುತ್ತೇನೆ. ದಿ:26–2–2010ರಂದು ರಾಸಾಯನಿಕ ತಜ್ಞರ ಅಭಿಪ್ರಾಯ ಪಡೆದು ಅರೋಪಿಗಳ ವಿರುದ್ಧ ಮಾನ್ಯ ನ್ಯಾಯಾಲಯದಲ್ಲಿ ದೋಷಾರೋಪಣಾ ಪಟ್ಟಿ ಸಲ್ಲಿಸಿರುತ್ತೇನೆ. ರಾಸಾಯನಿಕ ತಜ್ಞರ ವರದಿ ನಿಶಾನೆ ಪಿ–4 ರಲ್ಲಿದೆ, ನಿಶಾನೆ ಪಿ–4 ಎ ರನ್ನು ಸ್ವೀಕರಿಸಿದ ಬಗ್ಗೆ ತನ್ನ ಸಹಿ ಇದ್ದು ಅದನ್ನು ನಿಶಾನೆ ಪಿ–4 ಬಿ ಎಂದು ಗುರುತಿಸಲಾಯಿತು.

ವಾಹನದ ಮಾಲೀಕರಾಗಲಿ ಹಾಗೂ ಅವರ ಪರ ವಕೀಲರು ಯಾರೂ ಹಾಜರಾಗದಿರದ ಪ್ರಯುಕ್ತ ಪಾಟೀ ಸವಾಲು ಇಲ್ಲವೆಂದು ಪರಿಗಣಿಸಿ ಪಿಡಬ್ಲ್ಯೂ–1 ಸಾಕ್ಷಿ ವಿಚಾರಣೆಯನ್ನು ನ್ಯಾಯಾಲಯದಲ್ಲಿ ಮುಕ್ತಾಯಗೊಳಿಸಲಾಯಿತು.

**ಪ್ರಾ.ಸಾ: 2**

ಪ್ರಾಸಿಕ್ಯೂಶನ್ ಪರ ಪ್ರಕರಣದ ತನಿಖಾಧಿಕಾರಿಯಾದ ಶ್ರೀ. ಎಂ.ಕೆ.ಕೇಶವ ಮೂರ್ತಿ ಅಬಕಾರಿ ನಿರೀಕ್ಷಕರು, ಮಂಗಳೂರು ದಕ್ಷಿಣ ವಲಯ–2 ಮಂಗಳೂರು ಇವರು ದಿ: 15–6–2010 ರಂದು ಈ ಪ್ರಾಧಿಕಾರದ ಮುಂದೆ ಹಾಜರಾಗಿ ಎ.ಡಿ.ಪಿ.ಯವರ ಮುಖ್ಯ ವಿಚಾರಣೆಗೆ ಉತ್ತರವನ್ನು ನೀಡುತ್ತಾ, ತಾನು ತಕ್ಷೀರಿಗೆ ಸಂಬಂಧಿಸಿದ ಸೊತ್ತುಗಳನ್ನು ದಿ:18–11–2009 ರಂದು ಫಿರ್ಯಾದುದಾರರಿಂದ ಪಡೆದುಕೊಂಡಿದ್ದು, ಈ ಬಗ್ಗೆ ತನಿಖಾ ವರದಿಯನ್ನು ಈ ಪ್ರಾದಿಕಾರಕ್ಕೆ ದಿ:29–3–2010ರಂದು ಸಲ್ಲಿಸಿರುತ್ತೇನೆ. ತನ್ನ ತನಿಖಾ ವರದಿಯನ್ನು ನಿಶಾನೆ ಪಿ–5 ಎಂದು, ಅದರಲ್ಲಿರುವ ತನ್ನ ಸಹಿಯನ್ನು ನಿಶಾನೆ ಪಿ–5 ಎ ಎಂದು ಗುರುತಿಸಲಾಯಿತು. ಪ್ರಾದೇಶಿಕ ಸಾರಿಗೆ ಅಧಿಕಾರಿಯವರ ಬಿ ಎಕ್ಸ್‌ಟ್ರಾಕ್ಟ್ ವರದಿಯನ್ನು ನಿಶಾನೆ ಪಿ–6 ಎಂದು ಅದರಲ್ಲಿರುವ ತನ್ನ ಸಹಿಯನ್ನು ನಿಶಾನೆ ಪಿ –6 ಎ ಎಂದು ಗುರುತಿಸಲಾಯಿತು ಎಂದು ಸಾಕ್ಷಿ ನುಡಿದಿರುತ್ತಾರೆ.

ವಾಹನದ ಮಾಲೀಕರಾಗಲಿ ಹಾಗೂ ಅವರ ಪರ ವಕೀಲರು ಯಾರೂ ಹಾಜರಾಗದಿರದ ಪ್ರಯುಕ್ತ ಪಾಟೀ ಸವಾಲು ಇಲ್ಲವೆಂದು ಪರಿಗಣಿಸಿ ಪಿಡಬ್ಲ್ಯೂ–2 ನೇ ಸಾಕ್ಷಿಯ ವಿಚಾರಣೆಯನ್ನು ನ್ಯಾಯಾಲಯದಲ್ಲಿ ಮುಕ್ತಾಯಗೊಳಿಸಲಾಯಿತು.

ಪ್ರಕರಣದ ಫಿರ್ಯಾದುದಾರರು ಹಾಗೂ ತನಿಖಾಧಿಕಾರಿಯವರು ಪೂರಕವಾಗಿ ನೀಡಿರುವ ಸಾಕ್ಷ್ಯಾಧಾರಗಳಿಂದ ಹಾಗೂ ಲಭ್ಯವಿರುವ ದಾಖಲಾತಿಗಳಿಂದ ದಿ: 15–8–2009 ರಂದು ಜಪ್ತುಪಡಿಸಿಕೊಂಡಿರುವ ಅಂಬಾಸಿಡರ್ ಕಾರು ಸಂ:KA-21-647ರಲ್ಲಿ ಅಕ್ರಮವಾಗಿ ನಾದನ್ ಮಾಲ್ಟ್ ವಿಸ್ಕಿ 750 ಎಂಎಲ್‌ನ 72 ಸೀಸೆಗಳಲ್ಲಿ 54 ಲೀಟರು ಮದ್ಯ ಮತ್ತು ಷೀಟರ್ ಪೋರ್ಟ್ ಟ್ರಿಬಲ್ ಎಕ್ಸ್ ರಮ್ 750 ಎಂಎಲ್‌ನ 12 ಸೀಸೆಗಳಲ್ಲಿ 9.000 ಲೀಟರು ಮದ್ಯವನ್ನು ಯಾವುದೇ ಅಧಿಕೃತ ರಹದಾರಿ ಪತ್ರವಿಲ್ಲದೆ ಸಾಗಾಣಿಕೆಯಾಗಿರುವುದು ಸಾಬೀತಾಗಿರುವುದರಿಂದ ಒಂದನೇ ಅಂಶವನ್ನು ಗುಣಾತ್ಮಕವಾಗಿ ಪರಿಗಣಿಸಲಾಗಿದೆ. ವಾಹನ ಮಾಲೀಕರು ಹಾಗೂ ಅವರ ಪರ ವಕೀಲರು ಯಾರೂ ಈ ಪ್ರಾಧಿಕಾರದ ಮುಂದೆ ವಾಹನದ ಬಿಡುಗಡೆಗಾಗಿ ವಾಹನಕ್ಕೆ ಸಂಬಂಧಿಸಿ ಯಾವುದೇ ಅರ್ಜಿ ಸಲ್ಲಿಸದೇ ಈ ಪ್ರಾಧಿಕಾರದಿಂದ ದಿನಾಂಕ:24–4–2010ರಂದು ಕಾಲಂ 43(ಬಿ) ರಡಿ ನೀಡಲಾಗಿರುವ ಕಾರಣ ಕೇಳಿ ನೋಟೀಸನ್ನು ಆರೋಪಿ 1ನೇಯವರು ದಿ:29–4–2010ರಂದು ಸ್ವೀಕರಿಸಿಕೊಂಡಿದ್ದು, ಅವರು ಈ ಪ್ರಾಧಿಕಾರದ ಮುಂದೆ ಹಾಜರಾಗಿ ಅವರ ತಿಳುವಳಿಕೆಗೆ ಬಾರದೆ ಸದ್ರಿ ಅಪರಾಧವೆಸಗಲಾಗಿದೆ ಎಂಬ ಬಗ್ಗೆ ಯಾವುದೇ ಸಾಕ್ಷ್ಯಾಧಾರಗಳನ್ನು ಒಪ್ಪಿಸಲು ಮುಂದಾಗಿರುವುದಿಲ್ಲ. ಮತ್ತು ದಿನಾಂಕ:24.04.2010ರಂದು ನೀಡಲಾಗಿರುವ ಕಾರಣ ಕೇಳಿ ನೋಟಿಸಿಗೆ ಯಾವುದೇ ಉತ್ತರ ನೀಡಿರುವುದಿಲ್ಲ.

1965 ನೇ ಕರ್ನಾಟಕ ಅಬಕಾರಿ ಕಾಯಿದೆಯಡಿಯಲ್ಲಿ ಪ್ರಕರಣವನ್ನು ದಾಖಲು ಮಾಡುವಾಗ ಆರೋಪಿಯು ಪತ್ತೆಯಾಗದಿದ್ದಲ್ಲಿ ಅಥವಾ ಪತ್ತೆಯಾಗುವ ಸಾಧ್ಯತೆಯಿಲ್ಲದಿದ್ದಲ್ಲಿ, ಪ್ರಕರಣವನ್ನು ಪತ್ತೆ ಹಚ್ಚಿದ ಒಂದು ತಿಂಗಳಲ್ಲಿ ಯಾವುದೇ ವ್ಯಕ್ತಿಯು ಪ್ರಾಧಿಕಾರದ ಮುಂದೆ ಹಾಜರಾಗಿ ಅಪರಾಧದಲ್ಲಿ ಜಪ್ತಾಗಿರುವ ಸೊತ್ತುಗಳು ತಮ್ಮದೆಂದು, ಅವುಗಳು ಕಾನೂನುಬದ್ದವಾಗಿದೆಯೆಂದು ಸಾಕ್ಷ್ಯಾಧಾರದೊಂದಿಗೆ ಸಾಬೀತುಪಡಿಸದೇ ಇದ್ದಲ್ಲಿ, ಸದರಿ ಸೊತ್ತುಗಳು ಕರ್ನಾಟಕ ಅಬಕಾರಿ ಕಾಯಿದೆ ಕಾಲಂ 43 ರ ಅಡಿಯಲ್ಲಿ ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿರುವ ಸೊತ್ತುಗಳಾಗಿದ್ದಲ್ಲಿ, ಅಂತಹ ಸೊತ್ತುಗಳನ್ನು ಕಾಲಂ 43(ಸಿ) ಅಡಿಯಲ್ಲಿ ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳ ಬಹುದಾಗಿರುತ್ತದೆ.

ಸದರಿ ಪ್ರಕರಣದಲ್ಲಿ ಪೊಲೀಸ್ ನಿರೀಕ್ಷಕರು, ವಿಶೇಷ ಪೊಲೀಸ್ ಠಾಣೆ,ಅಬಕಾರಿ ಜಾರಿ ಮತ್ತು ಲಾಟರಿ ನಿಷೇಧ ದಳ, ಬಂದರು, ಮಂಗಳೂರು ಇವರು ದಾಖಲಿಸಿರುವ ಪ್ರಕರಣದಲ್ಲಿ ಆರೋಪಿಗಳು ಗೋವಾ ರಾಜ್ಯದಿಂದ ಅಕ್ರಮವಾಗಿ ಮದ್ಯವನ್ನು ಕೇರಳ ರಾಜ್ಯಕ್ಕೆ ಸಾಗಾಣಿಕೆ ಮಾಡುವಾಗ ವಾಹನವನ್ನು ಪಂಚನಾಮೆಯ ಮುಖಾಂತರ ಸ್ವಾಧೀನಪಡಿಸಿದ್ದು ಹಾಗೂ ವಾಹನದಲ್ಲಿ ಜಪ್ತುಪಡಿಸಲಾಗಿರುವ ವಸ್ತು ರಾಸಾಯನಿಕ ತಜ್ಞರ ಅಭಿಪ್ರಾಯದಂತೆ ಮದ್ಯವೆಂದು ದೃಢಪಟ್ಟಿದ್ದು, ಸದರಿ ವಾಹನವನ್ನು ಕರ್ನಾಟಕ ಅಬಕಾರಿ ಕಾಯಿದೆಯಡಿ ಅಪರಾಧವೆಸಗಲು ಬಳಸಿರುವುದು ಸ್ಪಷ್ಟವಾಗಿ ಸಾಬೀತಾಗಿರುವುದಾಗಿ ಈ ಪ್ರಾಧಿಕಾರವು ತೀರ್ಮಾನ ತೆಗೆದುಕೊಳ್ಳಬೇಕಾಗಿರುತ್ತದೆ.

ತಕ್ಷೀರಿನಲ್ಲಿ ವಶಪಡಿಸಿಕೊಂಡ ಅಂಬಾಸಿಡರ್ ಕಾರು ಸಂ:KA-21-647 ನ್ನು ವಶಪಡಿಸಿ ಕೊಂಡು ಸುಮಾರು 10 ತಿಂಗಳು ಕಳೆದರೂ ಈ ಪ್ರಾಧಿಕಾರದ ಮುಂದೆ ಹಾಗೂ ತಕ್ಷೀರು ದಾಖಲಿಸಿದ ಪೊಲೀಸ್ ನಿರೀಕ್ಷಕರು,ವಿಶೇಷ ಪೊಲೀಸ್ ಠಾಣೆ ,ಅಬಕಾರಿ ಜಾರಿ ಮತ್ತು ಲಾಟರಿ ನಿಷೇಧ ದಳ, ಬಂದರು, ಮಂಗಳೂರುರವರ ಕಛೇರಿಯಲ್ಲಿ ಕೂಡಾ ಇದುವರೆಗೂ ವಾಹನದ ಬಿಡುಗಡೆಗಾಗಿ ಅಧಿಕೃತ ದಾಖಲಾತಿಗಳೊಂದಿಗೆ ವಾಹನ ಮಾಲೀಕರಾಗಲೀ ಅಥವಾ ಆರೋಪಿಗಳಾಗಲೀ ವಾಹನವು ತನ್ನದೆಂದು ತಿಳಿಸಿ ಬಿಡುಗಡೆ ಅರ್ಜಿ ಸಲ್ಲಿಸಿರುವುದಿಲ್ಲ. ಈ ಪ್ರಾಧಿಕಾರದಿಂದ ದಿನಾಂಕ:24–4–2010ರಂದು ವಾಹನದ ನೋಂದಣಿ ಮಾಲೀಕರಿಗೆ ಮತ್ತು ಆರೋಪಿಗೆ ಕಾರಣ ಕೇಳಿ ನೋಟೀಸನ್ನು ನೀಡಲಾಗಿದ್ದರೂ, ಸದರಿ ನೋಟೀಸುಗಳನ್ನು ಒಂದನೇ ಆರೋಪಿ ಇವರು ದಿನಾಂಕ:29–4–2010ರಂದು ಸ್ವೀಕರಿಸಿಕೊಂಡಿದ್ದು ಯಾವುದೇ ಉತ್ತರವನ್ನು ಈ ಪ್ರಾಧಿಕಾರಕ್ಕೆ ನೀಡಿರುವುದಿಲ್ಲ ಹಾಗೂ ಮುಟ್ಟುಗೋಲು ನಡವಳಿ ಹಾಜರಾತಿ ನೋಟೀಸು ಗಳನ್ನು ನೀಡಲಾಗಿದ್ದರೂ ಈ ಪ್ರಾಧಿಕಾರದ ಮುಂದೆ ಹಾಜರಾಗಿ ಸಾಕ್ಷಿದಾರರ ಪಾಟೀ ಸವಾಲು ಹಾಗೂ ರಕ್ಷಣಾ ಸಾಕ್ಷಿಯನ್ನು ಹಾಜರುಪಡಿಸಿರುವುದಿಲ್ಲ. ಆದುದರಿಂದ ಅಕ್ರಮ ಮದ್ಯ ಸಾಗಾಟ ತನ್ನ ತಿಳುವಳಿಕೆಗೆ ಬಾರದೆ ನಡೆದಿದೆ ಎಂಬುವುದನ್ನು ಸಾಕ್ಷ್ಯಾಧಾರಗಳೊಂದಿಗೆ ಸಾಬೀತು ಪಡಿಸುವುದು ವಾಹನ ಮಾಲೀಕರ ಆದ್ಯ ಹೊಣೆಗಾರಿಕೆಯಾಗಿರುತ್ತದೆ. ತನಿಖಾದಿಕಾರಿಯವರು ಸಲ್ಲಿಸಿದ್ದ ವಾಹನದ ಬಿ ಎಕ್ಸ್‌ಟ್ರಾಕ್ಟ್ ವರದಿಯ ಪ್ರಕಾರ ವಾಹನದ ನೊಂದಾಣಿ ಮಾಲೀಕ ಶ್ರೀ.ನಾರಾಯಣ ಮೂಲ್ಯ ಬಿನ್:ವೆಂಕಪ್ಪ ಮೂಲ್ಯ, ಮೈಂದಾಳ ಹೌಸ್, ನಾವೂರು, ಬಂಟ್ವಾಳ ಇವರು ಆರ್.ಸಿ ಮಾಲೀಕರಾಗಿದ್ದು,ಸದ್ರಿ ಮೊಕದ್ದಮೆಯಲ್ಲಿ ಇವರು ದಿನಾಂಕ:15–8–09 ರಂದು ಖುದ್ದಾಗಿ ತನ್ನ ವಾಹನದಲ್ಲಿ ಗೋವಾದಿಂದ ಮದ್ಯವನ್ನು ಕೇರಳ ರಾಜ್ಯಕ್ಕೆ ಅಕ್ರಮವಾಗಿ ಸಾಗಾಟ ಮಾಡಿರುವುದು ಮೆಲ್ನೋಟಕ್ಕೆ ಸಾಬೀತಾಗಿರುತ್ತದೆ ಹಾಗೂ ದಸ್ತಗಿರಿಯಾದ ಆರೋಪಿಯು ಇದುವರೆಗೂ ವಾಹನದ ಬಿಡುಗಡೆಗಾಗಿ ಅರ್ಜಿ ಸಲ್ಲಿಸದಿರುವ ಕಾರಣಕ್ಕೆ, ವಾಹನದಲ್ಲಿ ಮದ್ಯ ಸಾಗಾಟ ಮಾಡಿರುವುದು ಮೇಲ್ನೋಟಕ್ಕೆ ಸಾಬೀತಾಗಿರುವುದರಿಂದ ಹಾಗೂ ತಕ್ಷೀರಿನಲ್ಲಿ ವಶಪಡಿಸಿಕೊಂಡ ಅಂಬಾಸಿಡರ್ ಕಾರನ್ನು ಈಗಾಗಲೇ 10 ತಿಂಗಳು ಕಳೆದರೂ ಅದರ ಮಾಲೀಕತ್ವದ ಬಗ್ಗೆ ಹಾಗೂ ವಾಹನದ ಬಿಡುಗಡೆ ಬಗ್ಗೆ ಯಾರೂ ಅರ್ಜಿಯನ್ನು ಸಲ್ಲಿಸದಿರುವ ಕಾರಣ, ಗೋವಾ ರಾಜ್ಯದಿಂದ ಅಕ್ರಮವಾಗಿ ಮದ್ಯವನ್ನು ಕೇರಳ ರಾಜ್ಯಕ್ಕೆ ಸಾಗಾಟ ಮಾಡಲು ಬಳಸಿದ ವಾಹನವನ್ನು ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 43ಎ ರಡಿ ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದಾಗಿರುವುದರಿಂದ, ಈ ಪ್ರಕರಣದಲ್ಲಿ ಜಪ್ತುಪಡಿಸಲಾಗಿರುವ ಅಂಬಾಸಿಡರ್ ಕಾರು ಸಂ:KA-21-647ನ್ನು ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಈ ಕೆಳಗಿನಂತೆ ಆದೇಶ ಹೊರಡಿಸಲಾಗಿದೆ.

**ಆದೇಶ ಸಂಖ್ಯೆ: ಎಸ್‌ಡಿಕೆ/68/ಡಿಟಿಸಿಆರ್/2009–10, ದಿನಾಂಕ:19ನೇ ಜೂನ್, 2010**

ನೂರ್ ಮಹಮ್ಮದ್ ಹುಸೇನ್, ಅಧಿಕೃತ ಅಧಿಕಾರಿ ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಆದ ನಾನು ಕರ್ನಾಟಕ ಅಬಕಾರಿ ಕಾಯಿದೆ 1965 ರ ಕಾಲಂ 43(ಎ) ಅಡಿಯಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸಿ, ನಿಯಮ 43(ಬಿ) ರಲ್ಲಿ ಅನುಸರಿಸಬೇಕಾದ ಕ್ರಮಗಳನ್ನು ಜರುಗಿಸಿ ಪೊಲೀಸ್ ನಿರೀಕ್ಷಕರು, ವಿಶೇಷ ಪೊಲೀಸ್ ಠಾಣೆ, ಅಬಕಾರಿ ಜಾರಿ ಮತ್ತು ಲಾಟರಿ ನಿಷೇಧ ದಳ, ಬಂದರು, ಮಂಗಳೂರು ಇವರ ತಕ್ಷೀರು ಸಂ: 6/2009 ದಿ:15–8–2009 ರಲ್ಲಿ ಅಕ್ರಮ ಸಾಗಾಟಕ್ಕೆ ಬಳಸಿದ ಜಪ್ತುಪಡಿಸಿಕೊಂಡಿರುವ ಅಂಬಾಸಿಡರ್ ಕಾರು ಸಂ:KA-21-647 ನ್ನು ನಿಯಮ 43(ಸಿ) ರನ್ವಯ ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶಿಸಿರುತ್ತೇನೆ.

ಈ ಆದೇಶವನ್ನು ದಿನಾಂಕ:19–06–2010 ರಂದು ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಈ ಆದೇಶವು ಇಂದಿನಿಂದ 30 ದಿವಸಗಳ ನಂತರ ಜಾರಿಯಲ್ಲಿ ಬರುತ್ತದೆ.

**ನೂರ್ ಮಹಮ್ಮದ್ ಹುಸೇನ್**

ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್
ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

## ಅನುಬಂಧ-1

ಫಿರ್ಯಾದುದಾರರ ಪರ ಮಂಡಿಸಲಾದ ಸಾಕ್ಷಿಗಳ ವಿವರ

**ಪ್ರಾ.ಸಾ-1:** ಶ್ರೀ.ಬಿ.ಜಿ.ಆಚಾರ್, ಪೊಲೀಸ್ ನಿರೀಕ್ಷಕರು, ಅಬಕಾರಿ ಜಾರಿ ಮತ್ತು ಲಾಟರಿ ನಿಷೇಧದಳ, ಬಂದರು, ಮಂಗಳೂರು.

**ಪ್ರಾ.ಸಾ-2:** ಶ್ರೀ.ಎಂ.ಕೆ.ಕೇಶವಮೂರ್ತಿ ಅಬಕಾರಿ ನಿರೀಕ್ಷಕರು, ಮಂಗಳೂರು ದಕ್ಷಿಣ ವಲಯ-2, ಮಂಗಳೂರು.

## ಅನುಬಂಧ-2

ಫಿರ್ಯಾದುದಾರರ ಪರ ಮಂಡಿಸಲಾದ ದಾಖಲಾತಿಗಳು

ನಿಶಾನೆ ಪಿ-1 : ಮಹಜರು.

ನಿಶಾನೆ ಪಿ-1ಎ : ಮಹಜರಿನಲ್ಲಿ ಫಿರ್ಯಾದುದಾರರ ಸಹಿ

ನಿಶಾನೆ ಪಿ-2 : ಪ್ರಥಮ ಮಾಹಿತಿ ವರದಿ

ನಿಶಾನೆ ಪಿ-2ಎ : ಪ್ರಥಮ ಮಾಹಿತಿ ವರದಿಯಲ್ಲಿ ಫಿರ್ಯಾದುದಾರರ ಸಹಿ

ನಿಶಾನೆ ಪಿ-3 : ಪಿರ್ಯಾದುದಾರರ ವರದಿ

ನಿಶಾನೆ ಪಿ-4 : ರಾಸಾಯನಿಕ ವಿಶ್ಲೇಷಣಾ ವರದಿ

ನಿಶಾನೆ ಪಿ-4ಎ : ಅದರಲ್ಲಿರುವ ಫಿರ್ಯಾದುದಾರರ ಸಹಿ.

ನಿಶಾನೆ ಪಿ-5 : ಪ್ರಾ.ಸಾ -2 ರವರ ತನಿಖಾ ವರದಿ

ನಿಶಾನೆ ಪಿ-5ಐ : ಪ್ರಾ.ಸಾ -2 ರವರ ಸಹಿ

ನಿಶಾನೆ ಪಿ-6 : ಬಿ ಅಬ್‌ಸ್ಟ್ರಾಕ್ಟ್ ವರದಿ.

ನಿಶಾನೆ ಪಿ-6ಐ : ಪ್ರಾ.ಸಾ -2 ರವರ ಸಹಿ

## ಅನುಬಂಧ-3

ವಾಹನ ಮಾಲೀಕರ ಪರ ವಿಚಾರಣೆಗೆ ಯಾರೂ ಹಾಜರಾಗಿರುವುದಿಲ್ಲ.

## ಅನುಬಂಧ-4

ವಾಹನ ಮಾಲೀಕರ ಪರವಾಗಿ ಗುರುತಿಸಲಾದ ಸಾಕ್ಷಿದಾರರು

-ಇಲ್ಲ-

**ನೂರ್ ಮಹಮ್ಮದ್ ಹುಸೇನ್**

ಪಿ.ಆರ್.1090

ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

## ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್ ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು, ಇವರ ನ್ಯಾಯಾಲಯದಲ್ಲಿ

**ನಂ: ಎಸ್‌ಡಿಕೆ/377/ಡಿಟಿಸಿಆರ್/2008-09, ದಿನಾಂಕ:18ನೇ ಜೂನ್, 2010**

**ಉಪಸ್ಥಿತರು:** ನೂರ್ ಮಹಮ್ಮದ್ ಹುಸೇನ್

ಅಧಿಕೃತ ಅಧಿಕಾರಿ ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್ ದಕ್ಷಿಣ ಕನ್ನಡ ಜಿಲ್ಲೆ ಮಂಗಳೂರು.

| **ಫಿರ್ಯಾದುದಾರರು:** | **ಆರೋಪಿ ಮತ್ತು ವಾಹನದ ಮಾಲೀಕರು:** |
|---|---|
| ಪೊಲೀಸ್ ಉಪ ನಿರೀಕ್ಷಕರು, ವೇಣೂರು ಪೊಲೀಸ್ ಠಾಣೆ, ವೇಣೂರು. | 1) ಅನಿಲ್ ಕುಮಾರ್, ಬಿನ್ ಚಿನ್ನಪ್ಪ ಪೂಜಾರಿ ಪಂಚರತ್ನ ನಿವಾಸ: ಕುದ್ಯಾಡಿ ಗ್ರಾಮ ಮತ್ತು ಅಂಚೆ,ಬೆಳ್ತಂಗಡಿ ತಾಲ್ಲೂಕು. |

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ:28–4–2009 ರಂದು ಬೆಳಿಗ್ಗೆ ಸುಮಾರು 10–30 ಗಂಟೆ ಸಮಯದಲ್ಲಿ ಪೊಲೀಸ್ ಉಪಾಧೀಕ್ಷಕರು,ಅಬಕಾರಿ ಜಾರಿ ಮತ್ತು ಲಾಟರಿ ನಿಷೇಧ ದಳ, ಪಶ್ಚಿಮ ವಲಯ,ಮಂಗಳೂರು ಇವರಿಗೆ ದೊರೆತ ಖಚಿತ ವರ್ತಮಾನದ ಮೇರೆಗೆ ಸಿಬ್ಬಂಧಿಯವರೊಂದಿಗೆ ಕೂಡಿಕೊಂಡು ಬೆಳ್ತಂಗಡಿ ತಾಲೂಕಿನ ವೇಣೂರು ಎಂಬಲ್ಲಿ ಒಂದು ಆಟೋ ರಿಕ್ಷಾ ಬರುತ್ತಿರುವುದನ್ನು ಕಂಡು ಚಾಲಕನಿಗೆ ನಿಲ್ಲಿಸುವಂತೆ ಸೂಚಿಸಿದಾಗ ಆತನು ಆಟೊ ರಿಕ್ಷಾವನ್ನು ರಸ್ತೆಬದಿಯಲ್ಲಿ ನಿಲ್ಲಿಸಿ ಆತನ ಹೆಸರು ಮತ್ತು ವಿಳಾಸವನ್ನು ವಿಚಾರಿಸಿದಾಗ ಅನಿಲ್ ಕುಮಾರ್ ಬಿನ್:ಚಿನ್ನಪ್ಪ ಪೂಜಾರಿ ಪಂಚರತ್ನ ನಿವಾಸ: ಕುದ್ಯಾಡಿ ಗ್ರಾಮ ಮತ್ತು ಅಂಚೆ, ಬೆಳ್ತಂಗಡಿ ತಾಲ್ಲೂಕು, ಎಂದು ತಿಳಿಸಿರುತ್ತಾರೆ. ಆಟೋ ರಿಕ್ಷಾವನ್ನು ತಪಾಸಣೆ ಮಾಡಿದಾಗ ಸಾರ್ವಜನಿಕರ ಪ್ರಯಾಣಿಕರು ಕುಳಿತುಕೊಳ್ಳುವ ಹಿಂಬದಿಯಲ್ಲಿ ಒಂದು ರಟ್ಟಿನ ಬಾಕ್ಸ್ ಇದ್ದು, ಆ ಬಾಕ್ಸಿನ ಒಳಗಡೆ ಹೈವೇ ನಂ:1ವಿಸ್ಕಿ ಎಂದು ಬರೆದಿರುವ 180 ಎಂಎಲ್ ನ 48 ಸೀಸೆಗಳು ಇರುವುದು ಕಂಡುಬಂತು.ಸದ್ರಿ ಮದ್ಯವನ್ನು ಸಾಗಾಟ ಮಾಡಲು ಪರವಾನಿಗೆ ಇದೆಯೇ ಎಂದು ಕೇಳಿದಾಗ ಆತನಲ್ಲಿ ಯಾವುದೇ ಪರವಾನಿಗೆ ಇಲ್ಲದೇ ಆತನು ಯಾವಾಗಲೂ ಮದ್ಯದ ರಟ್ಟಿನ ಪೆಟ್ಟಿಗೆ ಯನ್ನು ತುಂಬಿಕೊಂಡು ತನ್ನ ಮನೆಯಾದ ಕುದ್ಯಾಡಿ ಗ್ರಾಮದ ಪಂಚರತ್ನ ನಿವಾಸದಲ್ಲಿ ಮಾರಾಟ ಮಾಡಲೆಂದು ಸಾಗಾಟ ಮಾಡಿರುವುದಾಗಿ ತಿಳಿಸಿರುತ್ತಾರೆ. ಸದ್ರಿ ಮದ್ಯದಿಂದ ರಾಸಾಯನಿಕ ಪರೀಕ್ಷೆಗಾಗಿ 180 ಎಂಎಲ್‌ನ ಒಂದು ಬಾಟಲಿಯನ್ನು ತೆಗೆದು ಅದಕ್ಕೆ ಬಟ್ಟೆ ದಾರ ಸುತ್ತಿ ಅರಗು ಸೀಲಿನಿಂದ ಸೀಲು ಮಾಡಿ ಪಂಚರ ಸಹಿಯುಳ್ಳ ಚೀಟಿಯನ್ನು ಅಂಟಿಸಲಾಯಿತ್ತು. ಸದ್ರಿ ಆಟೋ ರಿಕ್ಷಾವನ್ನು ಪರಿಸೀಲಿಸಿದಾಗ ಇದರ ನೊಂದಾವಣೆ ಸಂ: KA-21-7803 ಆಗಿದ್ದು, ರಿಕ್ಷಾದ ಹಿಂಭಾಗದಲ್ಲಿ ಪಂಚರತ್ನ ಎಂಬ ಹೆಸರಿನಿಂದ ಬರೆದಿರುವುದು. ಇದರ ಚಾಸೀಸ್ ನಂ:24FBMD25107 ಆಗಿದ್ದು, ಇಂಜಿನ್ ನಂ: AEMBMD26434 ಆಗಿರುತ್ತದೆ. ಸದ್ರಿ ಆಟೋ ರಿಕ್ಷಾವನ್ನು ಹಾಗೂ ಮದ್ಯವನ್ನು ಇಲಾಖಾ ವಶಕ್ಕೆ ತೆಗೆದುಕೊಂಡು, ಆಟೋ ರಿಕ್ಷಾದ ಚಾಲಕನನ್ನು ಸ್ಥಳದಲ್ಲಿಯೇ ದಸ್ತಗಿರಿ ಮಾಡಿ, ಮಹಜರನ್ನು ಸ್ಥಳದಲ್ಲಿಯೇ ಬರೆದು ಮಹಜರಿನಲ್ಲಿ ಸ್ಥಳ ಚೆಕ್ ಬಂಧಿಯನ್ನು ನಮೂದಿಸಿ ಮಹಜರಿಗೆ ಪಂಚರ ಹಾಗೂ ಸಿಬಂದಿಯವರ ಸಹಿಯನ್ನು ಪಡೆದು ಕೊಂಡಿರುತ್ತಾರೆ. ಇದು ಕರ್ನಾಟಕ ಅಬಕಾರಿ ಕಾಯಿದೆ 1965 ರ ಕಲಂ 32,34 ರ ಪ್ರಕಾರ ಅಪರಾಧ ಹಾಗೂ ಶಿಕ್ಷಾರ್ಹವಾಗಿರುವುದರಿಂದ, ಜಪ್ತು ಮಾಡಲಾದ ಸೊತ್ತುಗಳನ್ನು ಮತ್ತು ದಸ್ತಗಿರಿಯಾದ ಆರೋಪಿಯನ್ನು ಹಾಗೂ ಸ್ಥಳದಲ್ಲಿ ತಯಾರಿಸಿದ ಮಹಜರಿನೊಂದಿಗೆ ಠಾಣಾಧಿಕಾರಿಗಳು, ವೇಣೂರು ಪೊಲೀಸ್ ಠಾಣೆ, ವೇಣೂರು ಇವರಿಗೆ ತಕ್ಷೀರು ದಾಖಲಿಸಲು ಹಸ್ತಾಂತರಿಸಲಾಗಿದ್ದು, ಪೊಲೀಸ್ ಉಪ ನಿರೀಕ್ಷಕರು, ವೇಣೂರು ಪೊಲೀಸ್ ಠಾಣೆ, ವೇಣೂರು ಬೆಳ್ತಂಗಡಿ ತಾಲೂಕು ದಕ್ಷಿಣ ಕನ್ನಡ ಜಿಲ್ಲೆ ಇವರು ಅರೋಪಿ ಅನಿಲ್ ಕುಮಾರ್ ಬಿನ್:ಚಿನ್ನಪ್ಪ ಪೂಜಾರಿ ಪಂಚರತ್ನ ನಿವಾಸ: ಕುದ್ಯಾಡಿ ಗ್ರಾಮ ಮತ್ತು ಅಂಚೆ, ಬೆಳ್ತಂಗಡಿ ತಾಲ್ಲೂಕು, ಇವರ ವಿರುದ್ದ ತಕ್ಷೀರು ಸಂ:25/2009 ದಿ:28–4–2009 ರಂತೆ ಮೊಕದ್ದಮೆಯನ್ನು ದಾಖಲಿಸಿಕೊಂಡು ಮಾನ್ಯ ನ್ಯಾಯಾಲಯ ಹಾಗೂ ಈ ಪ್ರಾಧಿಕಾರಕ್ಕೆ ವರದಿ ಸಲ್ಲಿಸಿರುತ್ತಾರೆ.

ಪೊಲೀಸ್ ಉಪ ನಿರೀಕ್ಷಕರು, ವೇಣೂರು ಪೊಲೀಸ್ ಠಾಣೆ, ವೇಣೂರು ಬೆಳ್ತಂಗಡಿ ತಾಲೂಕು ಇವರ ಪತ್ರ ಸಂಖ್ಯೆ ದಿ:29–4–2009ರಂದು ತಕ್ಷೀರಿನಲ್ಲಿ ವಶಪಡಿಸಿಕೊಂಡ ಮದ್ಯ ಹಾಗೂ ಆಟೋ ರಿಕ್ಷಾವನ್ನು ಮುಂದಿನ ಮುಟ್ಟುಗೋಲು ನಡವಳಿಗೆ ಸಂಬಂಧಿಸಿ ವಲಯ ಅಬಕಾರಿ ನಿರೀಕ್ಷಕರು, ಬೆಳ್ತಂಗಡಿ ವಲಯ ಇವರಿಗೆ ಹಸ್ತಾಂತರಿಸಲು ಅನುಮತಿ ನೀಡಬೇಕೆಂದು ಕೋರಿರುವ ಮೇರೆಗೆ ಈ ಪ್ರಾಧಿಕಾರದ ಆದೇಶ ಸಂ:ಎಸ್‌ಡಿಕೆ:377: ಡಿಟಿಸಿಆರ್:2008–09 ದಿ:12–5–2009ರಲ್ಲಿ ತಕ್ಷೀರಿನಲ್ಲಿ ವಶಪಡಿಸಿಕೊಂಡ ಮದ್ಯ ಹಾಗೂ ಆಟೋ ರಿಕ್ಷಾವನ್ನು ಮುಂದಿನ ಸೂಕ್ತ ಕ್ರಮಕ್ಕಾಗಿ ಅಬಕಾರಿ ನಿರೀಕ್ಷಕರು, ಬೆಳ್ತಂಗಡಿ ವಲಯ,ಬೆಳ್ತಂಗಡಿ ಇವರಿಗೆ ಹಸ್ತಾಂತರಿಸಲು ಆದೇಶ ನೀಡಲಾಗಿರುತ್ತದೆ.

ಅನಿಲ್ ಕುಮಾರ್ ಬಿನ್:ಚಿನ್ನಪ್ಪ ಪೂಜಾರಿ ಪಂಚರತ್ನ ನಿವಾಸ: ಕುದ್ಯಾಡಿ ಗ್ರಾಮ ಮತ್ತು ಅಂಚೆ, ಬೆಳ್ತಂಗಡಿ ತಾಲ್ಲೂಕು, ಇವರು ತಮ್ಮ ವಕೀಲರ ಮುಖಾಂತರ ದಿ:27–5–2009ರಂದು ಅರ್ಜಿ ಸಲ್ಲಿಸಿ, ತಕ್ಷೀರಿನಲ್ಲಿ ವಶಪಡಿಸಿಕೊಂಡ ಅಟೋ ರಿಕ್ಷಾ ಸಂ:KA-21-7803ರ ಆರ್.ಸಿ. ಮಾಲೀಕರು ತಾನೆಂದು, ಈ ಬಗ್ಗೆ ವಾಹನದ ಆರ್.ಸಿ ಪುಸ್ತಕದ ಜೆರಾಕ್ಸ್ ಪ್ರತಿಯನ್ನು ಲಗತ್ತಿಸಿ ಸದ್ರಿ ಆಟೋ ರಿಕ್ಷಾವು ಯಾವುದೇ ಅಕ್ರಮ ಮದ್ಯ ಸಾಗಾಣಿಕೆಯಲ್ಲಿ ಒಳಗೊಂಡಿರುವುದಿಲ್ಲ. ತಕ್ಷೀರಿನಲ್ಲಿ ವಶಪಡಿಸಿಕೊಂಡ ಆಟೋರಿಕ್ಷಾ ವನ್ನು ತನಗೆ ತಾತ್ಕಾಲಿಕ ನೆಲೆಯಲ್ಲಿ ಬಿಡುಗಡೆಗೊಳಿಸಬೇಕೆಂದು ತಮ್ಮ ಅರ್ಜಿಯಲ್ಲಿ ಕೋರಿರುತ್ತಾರೆ.

ವಾಹನದ ಮಾಲೀಕರ ಅರ್ಜಿಯ ಕುರಿತು ಅಬಕಾರಿ ನಿರೀಕ್ಷಕರು, ಬೆಳ್ತಂಗಡಿ ವಲಯ ಇವರು ಪ್ರಾದೇಶಿಕ ಸಾರಿಗೆ ಅಧಿಕಾರಿಗಳಿಂದ ವಾಹನದ ಮೌಲ್ಯ ಮಾಪನ ವರದಿ ಮತ್ತು ವಾಹನದ ಬಿ ರಿಜಿಸ್ಟಾರ್ ಎಕ್ಸ್‌ಟ್ರಾಕ್ಟ್ ವರದಿಯನ್ನು ಪಡೆದು

ದಿನಾಂಕ:13–7–2010ರಂದು ಈ ಪ್ರಾಧಿಕಾರಕ್ಕೆ ಒಪ್ಪಿಸಿರುತ್ತಾರೆ. ಸದ್ರಿ ಪತ್ರದ ಅನುಸಾರ ಅಬಕಾರಿ ನಿರೀಕ್ಷಕರು, ಬೆಳ್ತಂಗಡಿ ವಲಯ, ಬೆಳ್ತಂಗಡಿ ಇವರ ತನಿಖಾ ವರದಿ ಸಂ:ಬಿಎಲ್‌ಡಿ:ಇಎಕ್ಸ್‌ಇ:ಸಿಆರ್‌ಎಂ:10: 2009–10 ದಿ:13–7–2009ರ ವರದಿಯಲ್ಲಿ ಮೋಟಾರು ವಾಹನ ನಿರೀಕ್ಷಕರು ಇವರ ಮೌಲ್ಯ ಮಾಪನ ಪತ್ರ ದಿ:24–6–2009 ರಲ್ಲಿ ಬಜಾಜ್ ಅಟೋ ರಿಕ್ಷಾ ವಾಹನದ ಈಗಿನ ಮೌಲ್ಯ ರೂ.16000/– ಆಗಬಹುದೆಂದು ದೃಡೀಕರಣ ಪತ್ರ ನೀಡಿರುತ್ತಾರೆ. ಹಾಗೂ ಬಿ ಎಕ್ಸ್‌ಟ್ರಾಕ್ಟ್ ವರದಿಯನ್ನು ಸಲ್ಲಿಸಲಾಗಿದ್ದು, ಸದ್ರಿ ವರದಿಯಲ್ಲಿ ವಾಹನದ ಮಾಲೀಕ ಶ್ರೀ. ಅನಿಲ್ ಕುಮಾರ್ ಬಿನ್: ಚಿನ್ನಪ್ಪ ಪೂಜಾರಿ ಪಂಚರತ್ನ ನಿವಾಸ, ಕುದ್ಯಾಡಿ ಬೆಳ್ತಂಗಡಿ ತಾಲೂಕು ಹಾಗೂ ವಾಹನದ ಚಾಸೀಸ್ ನಂಬರ್ ಮತ್ತು ಇಂಜಿನ್ ನಂಬರ್ ಒಂದಕ್ಕೊಂದು ತಾಳೆಯಾಗಿರುತ್ತದೆ. ಹಾಗೂ ತಕ್ಷೀರಿನಲ್ಲಿ ತೆಗೆದ ಸ್ಯಾಂಪಲ್‌ಗಳನ್ನು ಸಹಾಯಕ ಪೊಲೀಸ್ ಅಧೀಕ್ಷಕರು, ಪುತ್ತೂರು ಉಪ ವಿಭಾಗ, ಪುತ್ತೂರು ಇವರಿಂದ ರಾಸಾಯನಿಕ ವಿಶ್ಲೇಷಣೆಗೆ ಕಳುಹಿಸಲಾಗಿದ್ದು, ರಾಸಾಯನಿಕ ವಿಶ್ಲೇಷಕರು ದ.ಕ ಜಿಲ್ಲೆ ಮಂಗಳೂರುರವರ ಪತ್ರ ಸಂ:ಇ–180 ದಿ:16–5–2009ರ ವರದಿಯಲ್ಲಿ ಮದ್ಯದ ಮದ್ಯಸಾರ ಪ್ರಮಾಣ 42% ಇರುವುದಾಗಿ ದೃಡೀಕರಣ ಪತ್ರ ನೀಡಿರುತ್ತಾರೆ. ತಕ್ಷೀರಿನಲ್ಲಿ ವಶಪಡಿಸಿಕೊಂಡ ಆಟೋರಿಕ್ಷಾವನ್ನು ಹಾಗೂ ಮದ್ಯವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆಟೋ ರಿಕ್ಷಾವನ್ನು ಬಹಿರಂಗ ಹರಾಜಿನಲ್ಲಿ ಮತ್ತು ಮದ್ಯವನ್ನು ನಾಶಪಡಿಸಲು ಆದೇಶ ನೀಡಬೇಕೆಂದು ತನಿಖಾಧಿಕಾರಿಯವರು ಶಿಫಾರಸ್ಸು ಮಾಡಿರುತ್ತಾರೆ. ಸದ್ರಿ ವರದಿಯನ್ನು ಅವಲೋಕನೆ ಮಾಡಿ ಅಬಕಾರಿ ಉಪ ಅಧೀಕ್ಷಕರು, ಬಂಟ್ವಾಳ ಉಪ ವಿಭಾಗ, ಬಂಟ್ವಾಳ ಇವರ ವರದಿ ಸಂ:102/2008–09 ದಿ:18–7–2009ರ ವರದಿಯಲ್ಲಿ ತಕ್ಷೀರಿನಲ್ಲಿ ವಶಪಡಿಸಿಕೊಂಡ ಮದ್ಯ ಹಾಗೂ ಆಟೋ ರಿಕ್ಷಾವನ್ನು ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 43 ಸಿ ರೀತ್ಯಾ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ವಿಲೇವಾರಿಗೊಳಿಸಲು ಶಿಫಾರಸ್ಸು ಮಾಡಿರುತ್ತಾರೆ.

ವಾಹನದ ಆರ್.ಸಿ ಮಾಲೀಕರಾದ ಶ್ರೀ. ಅನಿಲ್ ಕುಮಾರ್ ಬಿನ್: ಚಿನ್ನಪ್ಪ ಪೂಜಾರಿ ಪಂಚರತ್ನ ನಿವಾಸ, ಕುದ್ಯಾಡಿ ಬೆಳ್ತಂಗಡಿ ತಾಲೂಕು ಇವರಿಗೆ ಈ ಪ್ರಾಧಿಕಾರದಿಂದ ದಿ:27–7–2009ರಂದು, ಮೋಟಾರು ವಾಹನ ನಿರೀಕ್ಷಕರು, ಪ್ರಾದೇಶಿಕ ಸಾರಿಗೆ ಅಧಿಕಾರಿಗಳ ಕಛೇರಿ, ಪುತ್ತೂರು ಇವರು ದಿ:24–6–2009ರಂದು ಸದ್ರಿ ವಾಹನದ ಪ್ರಸ್ತುತ ಮಾರುಕಟ್ಟೆ ಅಂದಾಜು ಮೌಲ್ಯ ರೂ.16000/–ಗಳಾಗಬಹುದೆಂದು ದೃಡೀಕರಣ ಪತ್ರ ನೀಡಿರುವುದ ರಿಂದ, ತಕ್ಷೀರಿನಲ್ಲಿ ವಶಪಡಿಸಿಕೊಂಡ ವಾಹನ ಸಂ:KA-21-7803 ಆಟೋ ರಿಕ್ಷಾದ ಮೌಲ್ಯ ರೂ.16000/–ಕ್ಕೆ ಸಮಾನವಾದ ಬ್ಯಾಂಕ್ ಗ್ಯಾರೆಂಟಿಯನ್ನು ಯಾವುದೇ ಸ್ಥಳೀಯ ರಾಷ್ಟ್ರೀಕೃತ ಬ್ಯಾಂಕ್ ಶಾಖೆಯಿಂದ ಈ ಪ್ರಾಧಿಕಾರದ ಪರ ಪಡೆದು ಒಪ್ಪಿಸಲು ಹಾಗೂ ವಾಹನದ ಮೌಲ್ಯಕ್ಕೆ ಒಬ್ಬ ಶ್ಯೂರಿಟಿದಾರರಿಂದ ರೂ.100/– ಮುಖ ಬೆಲೆಯ ಛಾಪಾ ಕಾಗದದಲ್ಲಿ ಬಾಂಡ್ ಪತ್ರವನ್ನು ಪಡೆದು ಈ ಪ್ರಾಧಿಕಾರಕ್ಕೆ ಒಪ್ಪಿಸಲು ಸೂಚಿಸಿ ನೋಟಿಸು ನೀಡಲಾಗಿದ್ದು, ಸದ್ರಿ ನೋಟಿಸಿಗೆ ಅನುಗುಣವಾಗಿ ವಾಹನದ ಮಾಲೀಕರು ಈ ಪ್ರಾಧಿಕಾರಕ್ಕೆ ದಿನಾಂಕ:29–7–2009ರಂದು ಸಿಂಡಿಕೇಟ್ ಬ್ಯಾಂಕ್, ಬೆಳ್ತಂಗಡಿ ಶಾಖೆ, ಬೆಳ್ತಂಗಡಿ ಇವರಿಂದ ರೂ.16000/–ದ ಮೌಲ್ಯಕ್ಕೆ ಸಮಾನವಾದ ಬ್ಯಾಂಕ್ ಭದ್ರತೆ ಸಂಖ್ಯೆ:E54BGJGF 09212000 ದಿ:31–7–2009ರಂತೆ ಭದ್ರತಾ ಪತ್ರ ಒಪ್ಪಿಸಿ, ಅಷ್ಟೇ ಮೊತ್ತಕ್ಕೆ ಜಾಮೀನು ದಾರರಾದ ಶ್ರೀ.ಬಾಬು ಪೂಜಾರಿ ಬಿನ್:ಕೊರಗಪ್ಪ ಪೂಜಾರಿ,38 ವರ್ಷ ,ವಾಸ ನಂ:64, ಹಿಮರಾದ ಹೌಸ್, ನಾವಾರ ವಿಲೇಜ್, ಸುಲ್ಕೇರಿ ಅಂಚೆ ಬೆಳ್ತಂಗಡಿ ತಾಲೂಕು ಇವರಿಂದ ಸದ್ರಿ ಮೊತ್ತಕ್ಕೆ ಬಾಂಡ್ ಪತ್ರ ಮತ್ತು ಸದ್ರಿ ವ್ಯಕ್ತಿಗಳಿಂದ ಅಫಿದಾವಿತ್‌ಗಳನ್ನು ಹಾಜರು ಪಡಿಸುತ್ತಾರೆ. ಹಾಗೂ ಬ್ಯಾಂಕ್ ಗ್ಯಾರೆಂಟಿಯನ್ನು ನೀಡಿದ್ದ ಬಗ್ಗೆ ಪ್ರಭಂದಕರು, ಸಿಂಡಿಕೇಟ್ ಬ್ಯಾಂಕ್ ಬೆಳ್ತಂಗಡಿ ಶಾಖೆ, ಬೆಳ್ತಂಗಡಿ ಇವರಿಂದ ಸ್ಥಿರೀಕರಣ ಪತ್ರ ಪ್ರಾಧಿಕಾರ ದಲ್ಲಿ ಸ್ವೀಕೃತವಾಗಿರುತ್ತದೆ.

ವಾಹನದ ಮಾಲೀಕರು ವಾಹನದ ಮೌಲ್ಯಕ್ಕೆ ಅನುಗುಣವಾಗಿ ರೂ.16,000/– ಸಮಾನವಾದ ಬ್ಯಾಂಕ್ ಭದ್ರತೆ ನೀಡಿರುವುದರಿಂದ ಪೊಲೀಸ್ ಉಪ ನಿರೀಕ್ಷಕರು, ವೇಣೂರು ಪೊಲೀಸ್‌ಠಾಣೆ, ವೇಣೂರು ಇವರ ತಕ್ಷೀರು ಸಂ:25/2009ಕ್ಕೆ ಸಂಬಂಧಿಸಿ ಜಪ್ತು ಮಾಡಿರುವ ಆಟೋ ರಿಕ್ಷಾ ನೊಂದಣಿ ಸಂ: KA-21-7803ನ್ನು ಕರ್ನಾಟಕ ಅಬಕಾರಿ ಕಾಯಿದೆ ಕಲಂ 43 ಎ ಮತ್ತು ಬಿ ರಡಿಯಲ್ಲಿ ಮುಂದಿನ ಮುಟ್ಟುಗೋಲು ವಿಚಾರಣೆಯನ್ನು ಕಾಯ್ದಿರಿಸಿ ಕರ್ನಾಟಕ ಅಬಕಾರಿ ಕಾಯಿದೆ ಕಲಂ 43ಎ (2)(1) ತಿದ್ದುಪಡಿ ನಿಯಮನುಸಾರ ಕೆಲವು ಷರತ್ತುಗಳ ಅನ್ವಯ ವಾಹನದ ಮಾಲೀಕರಾದ ಶ್ರೀ.ಅನಿಲ್ ಕುಮಾರ್ ಇವರ ಮಧ್ಯಂತರ ಸುಪರ್ದಿಗೆ ಬಿಡುಗಡೆಗೊಳಿಸಿ, ಈ ಪ್ರಾಧಿಕಾರದ ಆದೇಶ ಸಂ: ಎಸ್‌ಡಿಕೆ: 377: ಡಿಟಿಸಿಆರ್:2008–09 ದಿ:10–8–2009ರಂದು ಆದೇಶ ನೀಡಲಾಗಿರುತ್ತದೆ.

ತಕ್ಷೀರಿನಲ್ಲಿ ವಶಪಡಿಸಿಕೊಂಡ 180 ಎಂಎಲ್‌ನ 48 ಸೀಸೆಗಳಲ್ಲಿ ರಾಸಯನಿಕ ವಿಶ್ಲೇಷಣೆಗೆ ತೆಗೆದು ಉಳಿದ 180 ಎಂ ಎಲ್ ನ 48 ಸೀಸೆಗಳಂತೆ ಒಟ್ಟು 8.460 ಲೀ ಹೈವೇ ನಂ:1 ವಿಸ್ಕಿ ಮದ್ಯದ ಸೊತ್ತುಗಳಿಗೆ ಸ್ವಾಧೀನಪಡಿಸಿಕೊಳ್ಳುವ ಬಗ್ಗೆ ಈ ಪ್ರಾಧಿಕಾರದಲ್ಲಿ ಯಾರೊಬ್ಬರೂ ಬೇಡಿಕೆ ಅರ್ಜಿ ಸಲ್ಲಿಸದೇ ಇರುವುದು ಹಾಗೂ ವಾರುಸುದಾರರು ಮುಂದೆ ಬಂದು ಸದ್ರಿ

ಸೊತ್ತುಗಳು ತಮ್ಮದೆಂದು ತಿಳಿಸಿ ಬಿಡುಗಡೆ ಅರ್ಜಿ ಸಲ್ಲಿಸದೇ ಇದ್ದು ಮತ್ತು ಸದ್ರಿ ಸೊತ್ತುಗಳಿಗೆ ಸಂಬಂಧಿಸಿ ದಾಖಲಾಗಿರುವ ಮೊಕದ್ದಮೆಯಲ್ಲಿ ಆರೋಪಿ ಮತ್ತು ಮಾಲೀಕರನಾಗಿರುವ ಅನಿಲ್ ಕುಮಾರ್ ಇವರು ಸಹ ಸೊತ್ತುಗಳು ತನ್ನದೆಂದು ಪಡೆಯಲು ಮುಂದೆ ಬಾರದಿರುವ ಕಾರಣ ಪ್ರಕರಣದಲ್ಲಿ ಜಪ್ತಾದ ಸೊತ್ತುಗಳ ಪೈಕಿ ಆಟೋ ರಿಕ್ಷಾವನ್ನು ಹೊರತುಪಡಿಸಿ ಉಳಿದ 8.460 ಲೀ ಹೈವೇ ನಂ:1 ವಿಸ್ಕಿ ಮದ್ಯವನ್ನು ಈ ಪ್ರಾಧಿಕಾರದ ಆದೇಶ ಸಂ:ಎಸ್ ಡಿಕೆ:377:ಡಿಟಿಸಿಆರ್:2008–09 ದಿ:10–8–2009ರಂದು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ನಾಶಪಡಿಸಲು ಅದೇಶ ನೀಡಲಾಗಿರುತ್ತದೆ.

ವಾಹನದ ಮಾಲೀಕರಾದ ಶ್ರೀ.ಅನಿಲ್ ಕುಮಾರ್ ಇವರಿಗೆ ಈ ಪ್ರಾಧಿಕಾರದಿಂದ ದಿ:10–8–2009ರಂದು ಕರ್ನಾಟಕ ಅಬಕಾರಿ ಕಾಯಿದೆ 1965ರ ಸೆಷನ್ 43 ಬಿ ಪ್ರಕಾರ ಕಾರಣ ಕೇಳಿ ನೋಟಿಸನ್ನು ನೊಂದಾವಣೆ ಅಂಚೆ ಮೂಲಕ ನೀಡಲಾಗಿದ್ದು,ಸದ್ರಿ ನೋಟಿಸನ್ನು ಸ್ವೀಕರಿಸಿ ಸದ್ರಿ ನೋಟಿಸಿಗೆ ಉತ್ತರವನ್ನು ಅವರ ವಕೀಲರ ಮುಖಾಂತರ ಈ ಪ್ರಾಧಿಕಾರಕ್ಕೆ ದಿ:25–8–2009ರಂದು ಸಲ್ಲಿಸಿರುತ್ತಾರೆ.

ನಂತರ ಪ್ರಕರಣದ ವಿಚಾರಣೆಯನ್ನು ಆರಂಭಿಸಿ, ಈ ಪ್ರಕರಣದಲ್ಲಿ ಈ ಕೆಳಗಿನಂತೆ ವಿವಾದಾಂಶಗಳು ಉದ್ಭವಿಸುತ್ತದೆ.

**1) ಮೊದಲನೇ ವಿವಾದಾಂಶ:** ದಿ: 28–4–2009 ರಂದು ಬಜಾಜ್ ಆಟೋರಿಕ್ಷಾ ಸಂಖ್ಯೆ: KA-21-7803 ರಲ್ಲಿ ಅಕ್ರಮವಾಗಿ ಮದ್ಯ ಸಾಗಾಣಿಕೆಯಾಗಿದೆಯೇ? ಮತ್ತು ವಾಹನವನ್ನು ಕರ್ನಾಟಕ ಅಬಕಾರಿ ಕಾಯಿದೆ ಮತ್ತು ನಿಯಮಗಳ ರೀತ್ಯಾ ಉಲ್ಲಂಘನೆಗೆ ಬಳಸಲಾಗಿದೆಯೇ?

**2) ಎರಡನೇ ವಿವಾದಾಂಶ:** ಸದರಿ ವಾಹನದಲ್ಲಿ ಅಕ್ರಮವಾಗಿ ಮದ್ಯ ಸಾಗಾಣಿಕೆಯಾಗಿರುವುದರ ಬಗ್ಗೆ ವಾಹನ ಮಾಲೀಕರಿಗೆ ಅರಿವಿಲ್ಲದಂತೆ ಮತ್ತು ಅವರು ಶಾಮೀಲಾಗದೆ ನಡೆದಿದೆ ಹಾಗೂ ಇದರ ಬಗ್ಗೆ ಅವರು ಸಾಕಷ್ಟು ಮುಂಜಾಗ್ರತ ಕ್ರಮವನ್ನು ಕೈಗೊಳ್ಳಲಾಗಿತ್ತು ಎಂಬ ಅಂಶವನ್ನು ಆರೋಪಿಗಳು ಮತ್ತು ವಾಹನ ಮಾಲೀಕರು ಈ ಪ್ರಾಧಿಕಾರಕ್ಕೆ ತೃಪ್ತಿಕರವಾಗಿ ನಿರೂಪಿಸಿರುತ್ತಾರೆಯೇ? ಅಥವಾ ಇಲ್ಲವೇ?

**3) ಮೂರನೇ ವಿವಾದಾಂಶ:** ಜಪ್ತುಪಡಿಸಲಾದ ವಾಹನವನ್ನು ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿದೆಯೇ ಅಥವಾ ಇಲ್ಲವೇ?

ಒಂದನೇ ಅಂಶವನ್ನು ಗುಣಾತ್ಮಕವಾಗಿ, ಎರಡನೇ ಅಂಶವನ್ನು ನಕಾರಾತ್ಮಕವಾಗಿ ಮತ್ತು ಮೂರನೇ ಅಂಶವನ್ನು ಅಂತಿಮ ಆದೇಶದಂತೆ.

**ಪ್ರಾ.ಸಾ: 1**

ಪ್ರಾಸಿಕ್ಯೂಶನ್ ಪರ ಪ್ರಕರಣದ ಮಹಜರು ಸಾಕ್ಷಿದಾರರಾದ ಶ್ರೀ.ಪಾಪಯ್ಯ, ಪೋಲೀಸ್ ಉಪಾಧೀಕ್ಷಕರು, ಅಬಕಾರಿ ಜಾರಿ ಮತ್ತು ಲಾಟರಿ ನಿಷೇಧ ದಳ, ಪಶ್ಚಿಮ ವಲಯ,ಮಂಗಳೂರು ಇವರು ದಿ:8–12–2009ರಂದು ಈ ಪ್ರಾಧಿಕಾರದ ಮುಂದೆ ಎ.ಡಿ.ಪಿರವರ ಮುಖ್ಯ ವಿಚಾರಣೆಗೆ ಉತ್ತರವನ್ನು ನೀಡುತ್ತಾ ತಾನು ದಿ:28–4–2009ರಂದು ದೊರೆತ ಖಚಿತ ವರ್ತಮಾನದ ಮೇರೆಗೆ ತಮ್ಮ ಸಿಬ್ಬಂಧಿಯವರೊಂದಿಗೆ ವೇಣೂರು–ಮೂಡಬಿದ್ರೆ ಕಡೆಗೆ ಹೋಗುವ ದಾರಿ ಮದ್ಯದಲ್ಲಿ ಒಂದು ಅಟೋ ರಿಕ್ಷಾವನ್ನು ನಿಲ್ಲಿಸಿ ತಪಾಸಣೆ ಮಾಡಿದಾಗ ಅದರ ಹಿಂಬದಿ ಸೀಟಿನಲ್ಲಿ ಒಂದು ರಟ್ಟಿನ ಪೆಟ್ಟಿಗೆ ಇರುವುದು ಕಂಡು ಬಂತು. ಸದರಿ ಪೆಟ್ಟಿಗೆಯ ಮೇಲೆ ನಂ:1 ಹೈವೇ ವಿಸ್ಕಿ, ಜೆ.ಪಿ. ಡಿಸ್ಟಿಲರಿ ಪ್ರೈವೇಟ್ ಲಿಮಿಟೆಡ್ ಎಂದು ಬರೆದಿದು, ರಟ್ಟಿನ ಪೆಟ್ಟಿಗೆಯನ್ನು ತೆರೆದು ನೋಡಿದಾಗ ಅದರಲ್ಲಿ 180 ಎಂಎಲ್‌ನ ಮದ್ಯ ತುಂಬಿದ 48 ಸೀಸೆಗಳಿರುವುದು ಕಂಡು ಬಂತು. ಸದ್ರಿ ಅಟೋ ರಿಕ್ಷಾದ ಚಾಲಕನನ್ನು ವಿಚಾರಿಸಲಾಗಿ ಅತನ ಹೆಸರು ಅನಿಲ್ ಕುಮಾರ್ ಬಿನ್ ಚೆನ್ನಪ್ಪ ಪೂಜಾರಿ,ಬೆಳ್ತಂಗಡಿ ತಾಲೂಕು ಎಂದು ತಿಳಿಸಿದನು. ಸದ್ರಿ ಮದ್ಯವನ್ನು ಸಾಗಾಟ ಮಾಡಲು ಪರವಾನಿಗೆ ಇದೆಯೇ ಎಂದು ವಿಚಾರಿಸಲಾಗಿ ಅತನ ಬಳಿ ಯಾವುದೇ ಪರವಾನಿಗೆ ಇಲ್ಲವೆಂದು ತಿಳಿಸಿದನು. ಸದ್ರಿ ಆಟೋ ರಿಕ್ಷಾವನ್ನು ಪರಿಶೀಲಿಸಿದಾಗ ಇದರ ನೊಂದಣಿ ಸಂ:KA-21-7803 ಆಗಿದ್ದು, ಸದ್ರಿ ಆಟೋ ರಿಕ್ಷಾ ಹಾಗೂ ಮದ್ಯವನ್ನು ಪಂಚರ ಸಮಕ್ಷಮ ಮಹಜರು ಮುಖೇನಾ ಸ್ವಾಧೀನ ಪಡಿಸಿಕೊಳ್ಳಲಾಯಿತು.ಸದ್ರಿ ಮದ್ಯದಿಂದ ಒಂದು ಬಾಟಲಿಯನ್ನು ರಾಸಯನಿಕ ಪರೀಕ್ಷೆಗೆ ತೆಗೆದು ಪಂಚರ ಸಹಿಯಿರುವ ಚೀಟಿಯನ್ನು ಅಂಟಿಸಲಾಯಿತು. ಸದ್ರಿ ಮಹಜರನ್ನು ಬೆಳಿಗ್ಗೆ 10–40ರಿಂದ 11–45 ರವರೆಗೆ ಸ್ಥಳದಲ್ಲಿಯೇ ತಯಾರಿಸಿ ಆ ಸಮಯ ಪಂಚರು ಕೂಡಾ ಹಾಜರಿದ್ದು,ನಂತರ ಆರೋಪಿ, ಸೊತ್ತು ಹಾಗೂ ದಾಖಲೆಗಳೊಂದಿಗೆ ವೇಣೂರು ಠಾಣೆಗೆ ಬೇಟಿ ಕೊಟ್ಟು ವರದಿಯನ್ನು ನೀಡಿ ಮುಂದಿನ ತನಿಖೆಗಾಗಿ ಹಸ್ತಾಂತರಿಸಲಾಗಿದೆ. ಸ್ಥಳದಲ್ಲಿಯೇ ತಯಾರಿಸಿದ ಮಹಜರನ್ನು ನಿಶಾನೆ ಪಿ–1 ಎಂದು ಅದರಲ್ಲಿರುವ ತನ್ನ ಸಹಿಯನ್ನು ನಿಶಾನೆ ಪಿ–1 ಎ ಎಂದು ಗುರುತಿಸಲಾಯಿತು. ವೇಣೂರು ಠಾಣೆಯಲ್ಲಿ ತಯಾರಿಸಿದ ಪ್ರಥಮ ಮಾಹಿತಿ ವರದಿಯನ್ನು ನಿಶಾನೆ ಪಿ–2 ಎಂದು, ಅದರಲ್ಲಿರುವ ಸಾಕ್ಷಿ ಸಹಿಯನ್ನು ನಿಶಾಣೆ ಪಿ–2 ಎ

ಎಂದು ಗುರುತಿಸಲಾಯಿತು.ತಾನು ಸ್ವಾಧೀನಪಡಿಸಿದ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಶಿಫಾರಸ್ಸು ಮಾಡಿರುತ್ತಾರೆ.

ಅರ್ಜಿದಾರರ ಪರ ವಕೀಲರ ಪಾಟೀ ಸವಾಲಿಗೆ ಉತ್ತರಿಸುತ್ತ ತನ್ನ ಕೇಂದ್ರ ಕಛೇರಿ ಮಂಗಳೂರು ಮಹಾನಗರ ಪಾಲಿಕಯಲ್ಲಿರುತ್ತದೆ. ತಾನು ದಿ:28–4–2009ರಂದು ತನ್ನ ಕಛೇರಿಯಿಂದ ಬೆಳಿಗ್ಗೆ 8–00 ಗಂಟೆಗೆ ಹೊರಟಿರುತ್ತೇನೆ. ದಿ:30–4–2009ಕ್ಕೆ ಸಾರ್ವತ್ರಿಕ ಚುನಾವಣೆ ಇದೆ ಎಂದರೆ ಸರಿ, ಚುನಾವಣೆ ಸಂದರ್ಭದಲ್ಲಿ ಇಲಾಖಾ ಪ್ರಗತಿ ಉದ್ದೇಶದಿಂದ ಸುಳ್ಳು ಮೊಕದ್ದಮೆ ದಾಖಲಿಸಿರುತ್ತೇನೆ ಎಂದರೆ ಸರಿಯಲ್ಲ ಎಂದು ಸಾಕ್ಷಿ ನುಡಿದಿರುತ್ತಾರೆ.

ಮಹಜರು ಸಾಕ್ಷಿದಾರರು ನೀಡಿರುವ ಹೇಳಿಕೆಯು ಮಹಜರಿನಲ್ಲಿ ನಮೂದಿಸಿರುವ ಅಂಶಕ್ಕೆ ಒಂದಕ್ಕೊಂದು ತಾಳೆಯಾಗಿದ್ದು,ಇದರಿಂದ ಅರ್ಜಿದಾರರಿಗೆ ಯಾವುದೇ ಪ್ರಯೋಜನಕರ ಅಂಶವು ಸಾಬೀತಾಗಿರುವುದಿಲ್ಲ.

**ಪ್ರಾ.ಸಾ: 2**

ಪ್ರಾಸಿಕ್ಯೂಶನ್ ಪರ ಪ್ರಕರಣದ ಫಿರ್ಯಾದುದಾರರಾದ ಶ್ರೀ.ಎಂ.ವಾಸುದೇವ ನಾಯ್ಕ್,ಸಹಾಯಕ ಪೊಲೀಸ್ ಉಪ ನಿರೀಕ್ಷಕರು, ವೇಣೂರು ಪೊಲೀಸ್ ಠಾಣೆ,ವೇಣೂರು ಇವರು ದಿನಾಂಕ:9–2–2010ರಂದು ಎ.ಡಿ.ಪಿರವರ ಮುಖ್ಯ ವಿಚಾರಣೆಗೆ ಉತ್ತರವನ್ನು ನೀಡುತ್ತಾ ತಾನು ದಿ:28–4–2009ರಂದು ಠಾಣೆಯಲ್ಲಿ ಇದ್ದಾಗ ಮಧ್ಯಾಹ್ನ 2–00 ಗಂಟೆ ಸಮಯದಲ್ಲಿ ತಕ್ಷೀರಿಗೆ ಸಂಬಂಧಿಸಿದ ಸೊತ್ತುಗಳನ್ನು ಹಾಗೂ ಆರೋಪಿ ಅನಿಲ್ ಕುಮಾರನ್ನು ಠಾಣೆಗೆ ತಂದು, ಅಕ್ರಮವಾಗಿ ಮದ್ಯ ಸಾಗಾಟ ಮಾಡುತ್ತಿರುವ ಮೇರೆಗೆ ಆರೋಪಿಯ ವಿರುದ್ದ ತಕ್ಷೀರು ಸಂ:25/2009 ಕರ್ನಾಟಕ ಅಬಕಾರಿ ಕಾಯಿದೆ ಕಲಂ 32 ಮತ್ತು 34 ರಡಿ ಪ್ರಕರಣ ದಾಖಲಿಸಿಕೊಂಡು ಪ್ರಥಮ ಮಾಹಿತಿ ವರದಿಯನ್ನು ತಯಾರಿಸಿದೆನು. ಪ್ರಥಮ ಮಾಹಿತಿ ವರದಿಯನ್ನು ನಿಶಾನೆ ಪಿ–2 ಎಂದು ಗುರುತಿಸಲಾಗಿದ್ದು, ನಂತರ ಸದ್ರಿ ಮದ್ಯದಿಂದ ರಾಸಾಯನಿಕ ಪರೀಕ್ಷೆಗಾಗಿ ಒಂದು ಬಾಟಲಿಯನ್ನು ತೆಗೆದು ರಸಾಯನಿಕ ಪರೀಕ್ಷೆಗೆ ಕಳುಹಿಸಿರುತ್ತೇನೆ. ತಕ್ಷೀರಿಗೆ ಸಂಬಂಧಿಸಿದ ಪಿ.ಎಫ್‌ನ್ನು ಮಾನ್ಯ ನ್ಯಾಯಾಲಯಕ್ಕೆ ಸಲ್ಲಿಸಿರುತ್ತೇನೆ. ಹಾಗೂ ಅರೋಪಿಯನ್ನು ಮಾನ್ಯ ನ್ಯಾಯಾಲಯಕ್ಕೆ ಹಾಜರುಪಡಿಸಿದ್ದು,ಮುಂದಿನ ತನಿಖೆಗಾಗಿ ಪೊಲೀಸ್ ಉಪ ನಿರೀಕ್ಷಕರಿಗೆ ಹಸ್ತಾಂತರಿಸಿ ರುತ್ತೇನೆ ಎಂದು ಸಾಕ್ಷಿ ನುಡಿದಿರುತ್ತಾರೆ.

ಅರ್ಜಿದಾರರ ಪಾಟೀ ಸವಾಲಿಗೆ ಉತ್ತರಿಸುತ್ತಾ ತಾನು ಪಾಪಯ್ಯರವರಿಂದ ಯಾವುದೇ ಸೊತ್ತುಗಳನ್ನು ಪಡೆದುಕೊಂಡಿರುವುದಿಲ್ಲ, ಹಾಗೂ ಸುಳ್ಳು ಸಾಕ್ಷಿ ಹೇಳುತ್ತಿದ್ದೇನೆ ಎಂದರೆ ಸರಿಯಲ್ಲ ಎಂದು ಸಾಕ್ಷಿ ನುಡಿದಿರುತ್ತಾರೆ. ಫಿರ್ಯಾದುದಾರರು ನೀಡಿದ ಸಾಕ್ಷಿ ಹೇಳಿಕೆಗಳು ಒಂದಕ್ಕೊಂದು ಪೂರಕವಾಗಿದ್ದು ಇದರಿಂದ ವಾಹನದ ಮಾಲೀಕರು ಮದ್ಯ ವನ್ನು ಅಕ್ರಮವಾಗಿ ಸಾಗಾಟವಾಗದ ಬಗ್ಗೆ ಯಾವುದೇ ಅಂಶಗಳು ಸಾಬೀತಾಗಿರುವುದಿಲ್ಲ.

**ಪ್ರಾ.ಸಾ: 3**

ಪ್ರಾಸಿಕ್ಯೂಶನ್ ಪರ ಪ್ರಕರಣದ ತನಿಖಾಧಿಕಾರಿಯಾದ ಶ್ರೀ.ಸಿಹೆಚ್, ಸೋಮಶೇಖರ್ ಅಬಕಾರಿ ನಿರೀಕ್ಷಕರು, ಪುತ್ತೂರು ಉಪ ವಿಭಾಗ,ಪುತ್ತೂರು ಇವರು ದಿ:9–2–2010ರಂದು ಎ.ಡಿ.ಪಿ.ರವರ ಮುಖ್ಯ ವಿಚಾರಣೆಗೆ ಉತ್ತರವನ್ನು ನೀಡುತ್ತಾ ತಾನು ತಕ್ಷೀರಿಗೆ ಸಂಬಂಧಿಸಿದ ಸೊತ್ತುಗಳನ್ನು ವೇಣೂರು ಪೊಲೀಸ್ ಠಾಣೆಯಿಂದ ಪಡೆದುಕೊಂಡಿರುತ್ತೇನೆ. ತನಿಖೆಯನ್ನು ಮುಂದುವರಿಸಿ ಸದ್ರಿ ವಾಹನದ ಬಿ ಎಕ್ಸ್ ಟ್ರಾಕ್ಟ್ ವರದಿಯನ್ನು ಹಾಗೂ ಮೌಲ್ಯ ಮಾಪನ ವರದಿಯನ್ನು ತರಿಸಿರುತ್ತೇನೆ. ಬಿ ಎಕ್ಸ್‌ಟ್ರಾಕ್ಟ್ ವರದಿಯನ್ನು ನಿಶಾನೆ ಪಿ–3 ಎಂದು ಗುರುತಿಸ ಲಾಯಿತು ಎಂದು ಸಾಕ್ಷಿ ನುಡಿದಿರುತ್ತಾರೆ.

ಅರ್ಜಿದಾರರ ಪಾಟೀ ಸವಾಲಿಗೆ ಉತ್ತರಿಸುತ್ತಾ ತಾನು ಯಾವುದೇ ತನಿಖೆ ಮಾಡಿಲ್ಲ ಎಂದರೆ ಸರಿಯಲ್ಲ ಎಂದು ಸಾಕ್ಷಿ ನುಡಿದಿರುತ್ತಾರೆ.

**ಪ್ರಾ.ಸಾ:4**

ಪ್ರಾಸಿಕ್ಯೂಶನ್ ಪರ ಪ್ರಕರಣದ ಪಂಚ ಸಾಕ್ಷಿದಾರರಾದ ಶ್ರೀ.ಮಾರ್ಕ್ ಪಿರೇರಾ ಇವರು ದಿನಾಂಕ:9–2–2010ರಂದು ಎ.ಡಿ.ಪಿ.ರವರ ಮುಖ್ಯ ವಿಚಾರಣೆಗೆ ಉತ್ತರವನ್ನು ನೀಡುತ್ತಾ ತಾನು ದಿ:28–4–2009ರಂದು ತನ್ನ ಸಮಕ್ಷಮ ನಿಶಾನೆ ಪಿ–1 ರ ಮಹಜರಿಗೆ ಸಹಿ ಮಾಡಿರುವ ಬಗ್ಗೆ ತನಗೆ ತಿಳಿದಿರುವುದಿಲ್ಲ ಎಂದು ಸಾಕ್ಷಿ ನುಡಿದಿರುತ್ತಾರೆ. ಈ ಸಾಕ್ಷಿಯು ಈ ಹಂತದಲ್ಲಿ ಮಹಜರಿಗೆ ವಿರುದ್ದವಾಗಿ ಸಾಕ್ಷಿ ನುಡಿದಿರುವುದರಿಂದ ಮಾನ್ಯ ಸಹಾಯಕ ಅಭಿಯೋಗ ನಿರ್ದೇಶಕರು ಸಾಕ್ಷಿಯನ್ನು ಪ್ರತಿಕೂಲ ಸಾಕ್ಷಿ ಎಂದು ಪರಿಗಣಿಸಲು ಕೋರಿರುತ್ತಾರೆ.

ಅರ್ಜಿದಾರರಿಗೆ ಹಾಗೂ ಅವರ ಪರ ವಕೀಲರಿಗೆ ಈ ಪ್ರಾಧಿಕಾರದಿಂದ ರಕ್ಷಣಾ ಸಾಕ್ಷಿ ವಿಚಾರಣೆಯನ್ನು ನಡೆಸಲು ಹಲವಾರು ಬಾರಿ ಹಾಜರಾತಿ ನೋಟೀಸುಗಳನ್ನು ನೀಡಲಾಗಿದ್ದು, ಸದರಿ ನೋಟೀಸುಗಳು ಸ್ವೀಕೃತವಾದ ಬಗ್ಗೆ ಸ್ವೀಕೃತಿ ರಶೀದಿ

ಈ ಪ್ರಾಧಿಕಾರದಲ್ಲಿ ತಲುಪಿರುತ್ತದೆ. ರಕ್ಷಣಾ ಪರ ವಕೀಲರು ಈ ಪ್ರಾದಿಕಾರದಲ್ಲಿ ದಿನಾಂಕ:9–2–2010, 13–4–2010, 18–5–2010ರಂದು ನಡೆದ ವಿಚಾರಣೆಯಲ್ಲಿ ಹಾಜರಿದ್ದು. ಮೂರು ಬಾರಿ ರಕ್ಷಣಾ ಸಾಕ್ಷಿ ವಿಚಾರಣೆಗೆ ಕಾಲವಕಾಶ ಪಡೆದುಕೊಂಡಿದ್ದರೂ ಸಹ ರಕ್ಷಣಾ ವಿಚಾರಣೆ ನಡೆಸಲು ಮುಂದಾಗಿರುವುದಿಲ್ಲ.

ಪ್ರಕರಣದ ಫಿರ್ಯಾದುದಾರರು ಮತ್ತು ಮಹಜರು ಸಾಕ್ಷಿದಾರರು ಪೂರಕವಾಗಿ ನೀಡಿರುವ ಸಾಕ್ಷ್ಯಾಧಾರದ ಮೇಲೆ ಹಾಗೂ ಲಭ್ಯವಿರುವ ದಾಖಲಾತಿಗಳಿಂದ ದಿ:28–4–2009 ರಂದು ಜಪ್ತುಪಡಿಸಿಕೊಂಡಿರುವ ಆಟೋರಿಕ್ಷಾ ಸಂ: KA-21-7803 ರಲ್ಲಿ 8.640 ಲೀಟರ್ ಮದ್ಯವನ್ನು ಅಕ್ರಮವಾಗಿ ಸಾಗಾಣಿಕೆಯಾಗಿರುವುದು ಸಾಬೀತಾಗಿರುವುದರಿಂದ ಒಂದನೇ ಅಂಶವನ್ನು ಗುಣಾತ್ಮಕವಾಗಿ ಪರಿಗಣಿಸಲಾಗಿದೆ.

ಇಂತಹ ಅಕ್ರಮ ಮದ್ಯ ಸಾಗಾಟ ತನ್ನ ತಿಳುವಳಿಕೆಗೆ ಬಾರದೆ ನಡೆದಿದೆ ಎಂಬುವುದನ್ನು ಸಾಕ್ಷ್ಯಾಧಾರಗಳೊಂದಿಗೆ ಸಾಬೀತುಪಡಿಸುವುದು ವಾಹನ ಮಾಲೀಕರ ಆದ್ಯ ಹೊಣೆಗಾರಿಕೆಯಾಗಿರುತ್ತದೆ. ಈ ಮೊಕದ್ದಮೆಯಲ್ಲಿ ಖುದ್ದು ವಾಹನದ ಮಾಲೀಕರೇ ಅರೋಪಿಯಾಗಿ ಅಪರಾಧವೆಸಗಿರುವುದು ಮತ್ತು ಅಪರಾಧ ಸ್ಥಳದಲ್ಲಿ ಅವರನ್ನು ದಸ್ತಗಿರಿ ಮಾಡಲಾಗಿದೆ. ಆ ಕಾರಣದಿಂದ ವಾಹನ ಮಾಲೀಕರು ಅವರ ವಾಹನದಲ್ಲಿ ಅಕ್ರಮವಾಗಿ ಮದ್ಯ ಸಾಗಾಣಿಕೆ ಮಾಡಿರುವುದು ಮೇಲ್ನೋಟಕ್ಕೆ ಸಾಬೀತಾಗಿರುತ್ತದೆ. ಅಲ್ಲದೆ ಈ ಪ್ರಾಧಿಕಾರದ ಮುಂದೆ ಹಾಜರಾಗಿ ರಕ್ಷಣಾ ಸಾಕ್ಷಿ ನೀಡಿರುವುದಿಲ್ಲ. ಪೊಲೀಸ್ ಉಪಾಧೀಕ್ಷಕರು,ಅಬಕಾರಿ ಜಾರಿ ಮತ್ತು ಲಾಟರಿ ನಿಷೇಧ ದಳ, ಮಂಗಳೂರು ಇವರು ದಿ:28–4–2009–ರಂದು ರಸ್ತೆ ಕಾವಲು ನಡೆಸುತ್ತಿದ್ದ ಸಂದರ್ಭದಲ್ಲಿ ಆರ್.ಸಿ. ಮಾಲೀಕರು ಖುದ್ದು ಅಕ್ರಮ ಮದ್ಯ ಸಾಗಾಟ ಮಾಡುತ್ತಿದ್ದು, ದಸ್ತಗಿರಿಯಾದ ಆರೋಪಿ ವಾಹನದ ಚಾಲಕ ಹಾಗೂ ಮಾಲೀಕನಾಗಿದ್ದು, ತಾನೇ ಸ್ವತ: ಮದ್ಯವನ್ನು ಸಾಗಾಟ ಮಾಡಿರುವುದು ಮೇಲ್ನೋಟಕ್ಕೆ ಕಂಡು ಬಂದಿರುತ್ತದೆ ಆದುದರಿಂದ ವಾಹನ ಮಾಲೀಕನೇ ಸ್ವತ: ತನ್ನ ಆಟೋರಿಕ್ಷಾವನ್ನು ಅಕ್ರಮ ಮದ್ಲ ಸಾಗಾಣಿಕೆಗೆ ಬಳಸಿರುವುದು ನಿಸ್ಸಂದೇಹವಾಗಿ ಸಾಬೀತಾಗಿರುತ್ತದೆ. ಈ ಮೇಲಿನ ಕಾರಣಗಳಿಂದ ಎರಡನೇ ಅಂಶವನ್ನು ನಕಾರಾತ್ಮಕವಾಗಿ ಪರಿಗಣಿಸಿದೆ.

ಈ ಮೇಲಿನ ಎಲ್ಲಾ ಕಾರಣಗಳಿಂದ ಮಹಜರು ಸಾಕ್ಷಿಗಳ ವಿಚಾರಣೆ ಹಾಗೂ ಲಭ್ಯವಿರುವ ದಾಖಲಾತಿಗಳಿಂದ ಈ ಪ್ರಕರಣದಲ್ಲಿ ಜಪ್ತುಪಡಿಸಲಾಗಿರುವ ಆಟೋರಿಕ್ಷಾದಲ್ಲಿ ಅಕ್ರಮವಾಗಿ 8.640 ಲೀಟರ್ ಮದ್ಯ ಸಾಗಾಟ ಮಾಡಲು ಬಳಸಲಾಗಿರುವುದು ಮೇಲ್ನೋಟಕ್ಕೆ ಸಾಬೀತಾಗಿರುವುದರಿಂದ, ವಾಹನವನ್ನು ಕರ್ನಾಟಕ ಅಬಕಾರಿ ಕಾಯಿದೆ 1965 ರ ಕಲಂ 43ಎ ರಡಿ ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದಾಗಿರುವುದರಿಂದ, ಈ ಪ್ರಕರಣದಲ್ಲಿ ಜಪ್ತು ಪಡಿಸ ಲಾಗಿರುವ ಆಟೋರಿಕ್ಷಾ ಸಂ: KA-21-7803ನ್ನು ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿರುವುದಾಗಿ ತೀರ್ಮಾನಿಸಿ ಈ ಆದೇಶ.

**ಆದೇಶ ಸಂಖ್ಯೆ: ಎಸ್‌ಡಿಕೆ/377/ಡಿಟಿಸಿಆರ್/2008–09, ದಿನಾಂಕ:18ನೇ ಜೂನ್, 2010**

ನೂರ್ ಮಹಮ್ಮದ್ ಹುಸೇನ್, ಅಧಿಕೃತ ಅಧಿಕಾರಿ ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಆದ ನಾನು ಕರ್ನಾಟಕ ಅಬಕಾರಿ ಕಾಯಿದೆ 1965 ರ ಕಾಲಂ 43(ಎ) ಅಡಿಯಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸಿ, ನಿಯಮ 43(ಬಿ) ರಲ್ಲಿ ಅನುಸರಿಸಬೇಕಾದ ಕ್ರಮಗಳನ್ನು ಜರುಗಿಸಿ ಪೊಲೀಸ್ ಉಪಾದೀಕ್ಷಕರು, ಅಬಕಾರಿ ಜಾರಿ ಮತ್ತು ಲಾಟರಿ ನಿಷೇಧ ದಳ, ಮಂಗಳೂರು ಇವರು ದಿನಾಂಕ:28–4–2009ರಂದು ಪತ್ತೆ ಹಚ್ಚಿ ವರದಿ ಮಾಡಿರುವ ಪ್ರಕರಣಕ್ಕೆ ಪೊಲೀಸ್ ಉಪ ನಿರೀಕ್ಷಕರು, ವೇಣೂರು ಪೊಲೀಸ್ ಠಾಣೆ, ವೇಣೂರು ಇವರು ದಾಖಲಿಸಿರುವ ತಕ್ಸೀರು ಸಂಖ್ಯೆ:25/2009 ದಿನಾಂಕ:28–4–2009 ರಲ್ಲಿ ಜಪ್ತುಪಡಿಸಿರುವ ಬಜಾಜ್ ಆಟೋರಿಕ್ಷಾ ಸಂಖ್ಯೆ:KA-21-7803 ನ್ನು ನಿಯಮ 43ಎ(2) ರನ್ವಯ ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತೇನೆ.

ಈ ಪ್ರಾಧಿಕಾರದಿಂದ ದಿ:10–8–2009 ರಂದು ವಾಹನವನ್ನು ತಾತ್ಕಾಲಿಕವಾಗಿ ಮಧ್ಯಂತರ ಬಿಡುಗಡೆಗೊಳಿಸಿ ಹೊರಡಿಸಿರುವ ಆದೇಶವನ್ನು ರದ್ದುಗೊಳಿಸಿ ಆದೇಶಿಸಿದೆ. ಆರ್.ಸಿ. ಮಾಲೀಕರು ಸದರಿ ಮಧ್ಯಂತರ ಬಿಡುಗಡೆ ಹೊಂದಿರುವ ಬಜಾಜ್ ಆಟೋರಿಕ್ಷಾ ಸಂಖ್ಯೆ:KA-21-7803 ನ್ನು ಈ ಆದೇಶದ 30 ದಿನಗಳ ಒಳಗೆ ಈ ಪ್ರಾಧಿಕಾರದ ವಶಕ್ಕೆ ಅಬಕಾರಿ ನಿರೀಕ್ಷಕರು, ಬೆಳ್ತಂಗಡಿ ವಲಯ ಇವರಲ್ಲಿ ಒಪ್ಪಿಸಲು ಆದೇಶಿಸಿದೆ. ತಪ್ಪಿದಲ್ಲಿ ಭದ್ರತೆಯಾಗಿ ನೀಡಿರುವ ಬ್ಯಾಂಕ್ ಗ್ಯಾರಂಟಿ ಸಂಖ್ಯೆ: E54BGJGF09212000 ದಿ:31–7–2009 ಸಿಂಡಿಕೇಟ್ ಬ್ಯಾಂಕ್, ಬೆಳ್ತಂಗಡಿ ಶಾಖೆ, ಬೆಳ್ತಂಗಡಿ ಇದರ ಮೌಲ್ಯದ ಮೊತ್ತ ರೂ.16,000/– ವನ್ನು ಸರಕಾರಕ್ಕೆ ಪಡೆದು ಚಲನ್ ಮೂಲಕ ಖಜಾನೆಗೆ ಪಾವತಿಸಿಕೊಳ್ಳಲು ಆದೇಶಿಸಿದೆ. ಈ ಆದೇಶದ ಪಾಲನೆ ಹಾಗೂ ಸದ್ರಿ ಮುಟ್ಟುಗೋಲು ಹಾಕಿಕೊಳ್ಳಲಾದ ವಾಹನವನ್ನು ಅಬಕಾರಿ ನಿರೀಕ್ಷಕರು, ಬೆಳ್ತಂಗಡಿ ವಲಯ, ಬೆಳ್ತಂಗಡಿ ಇವರು ಪಡೆದುಕೊಂಡು ಈ ಪ್ರಾಧಿಕಾರಕ್ಕೆ ವರದಿ ಒಪ್ಪಿಸಲು ಆದೇಶಿಸಿದೆ.

ಈ ಆದೇಶವನ್ನು ದಿ:18–6–2010 ರಂದು ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಈ ಆದೇಶವು ಇಂದಿನಿಂದ 30 ದಿವಸಗಳ ನಂತರ ಜಾರಿಯಲ್ಲಿ ಬರುತ್ತದೆ.

**ನೂರ್ ಮಹಮ್ಮದ್ ಹುಸೇನ್**
ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್
ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

**ಅನುಬಂಧ–1**

ಫಿರ್ಯಾದುದಾರರ ಪರ ಮಂಡಿಸಲಾದ ಸಾಕ್ಷಿಗಳ ವಿವರ

ಪ್ರಾ.ಸಾ–1– ಶ್ರೀ.ಪಾಪಯ್ಯ, ಪೊಲೀಸ್ ಉಪಾಧೀಕ್ಷಕರು,ಅಬಕಾರಿ ಜಾರಿ ಮತ್ತು ಲಾಟರಿ ನಿಷೇಧದಳ, ಪಶ್ಚಿಮ ವಲಯ, ಮಂಗಳೂರು.

ಪ್ರಾ.ಸಾ–2– ಶ್ರೀ.ಎಂ.ವಾಸುದೇವ ನಾಯ್ಕ್,ಸಹಾಯಕ ಪೊಲೀಸ್ ಉಪ ನಿರೀಕ್ಷಕರು, ವೇಣೂರು ಪೊಲೀಸ್ ಠಾಣೆ, ವೇಣೂರು.

ಪ್ರಾ.ಸಾ–3: ಶ್ರೀ.ಸಿ.ಹೆಚ್, ಸೋಮಶೇಖರ್ ಅಬಕಾರಿ ನಿರೀಕ್ಷಕರು,ಪುತ್ತೂರು ಉಪವಿಭಾಗ, ಪುತ್ತೂರು.

ಪ್ರಾ.ಸಾ–4: ಪಂಚ ಸಾಕ್ಷಿದಾರರಾದ ಶ್ರೀ.ಮಾರ್ಕ್ ಪಿರೇರಾ

**ಅನುಬಂಧ–2**

ಫಿರ್ಯಾದುದಾರರ ಪರ ಮಂಡಿಸಲಾದ ದಾಖಲಾತಿಗಳು

ನಿಶಾನೆ ಪಿ–1 : ಮಹಜರ್ ಪ್ರತಿ
ನಿಶಾನೆ ಪಿ–1ಎ : ಮಹಜರ್‌ನಲ್ಲಿ ಪ್ರಾ.ಸಾ –1ರವರ ಸಹಿ
ನಿಶಾನೆ ಪಿ–2 : ಪ್ರಥಮ ಮಾಹಿತಿ ವರದಿ
ನಿಶಾನೆ ಪಿ–2ಎ : ಪ್ರಥಮ ಮಾಹಿತಿ ವರದಿಯಲ್ಲಿ ಪ್ರಾ.ಸಾ–2ರವರ ಸಹಿ
ನಿಶಾನೆ ಪಿ–3 : ಬಿ ಎಕ್ಸ್ ಟ್ರಾಕ್ಟ್ ವರದಿ

**ಅನುಬಂಧ–3**

ವಾಹನ ಮಾಲೀಕರ ಪರ ವಿಚಾರಣೆಗೆ ಯಾರೂ ಹಾಜರಾಗಿರುವುದಿಲ್ಲ.

**ಅನುಬಂಧ–4**

ವಾಹನ ಮಾಲೀಕರ ಪರವಾಗಿ ಗುರುತಿಸಲಾದ ಸಾಕ್ಷಿದಾರರು

– ಇಲ್ಲ –

**ನೂರ್ ಮಹಮ್ಮದ್ ಹುಸೇನ್**
ಪಿ.ಆರ್.1091 ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್
ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

## ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು ಇವರ ನ್ಯಾಯಾಲಯ

**ಸಂಖ್ಯೆ: ಡಿಟಿಸಿಆರ್:174/2009–10, ದಿನಾಂಕ:29ನೇ ಏಪ್ರಿಲ್, 2010**

**ಉಪಸ್ಥಿತರು:** ಡಾ॥ ವೈ. ಮಂಜುನಾಥ್,
ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್ ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು.

| **ಪಿರ್ಯಾದುದಾರರು:** | **ವಿರುದ್ಧ** | **ಪ್ರತಿವಾದಿ/ ಆರೋಪಿ** |
|---|---|---|
| ಅಬಕಾರಿ ಉಪ ನಿರೀಕ್ಷಕರು, ಹುಣಸೂರು ವಲಯ, ಹುಣಸೂರು. | | ಆರೋಪಿ ಪರಾರಿ |

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ:09.12.2009ರಂದು ಸಂಜೆ 5.30 ಗಂಟೆ ಸಮಯದಲ್ಲಿ ಅಬಕಾರಿ ಉಪ ನಿರೀಕ್ಷಕರು, ಹುಣಸೂರು ವಲಯ ಇವರು ರತ್ನಪುರಿ ಕಾಲೋನಿಯಿಂದ ಹುಣಸೂರು ಪಟ್ಟಣಕ್ಕೆ ಬರುವ ರಸ್ತೆಯ ಪ್ರಾರಂಭದಲ್ಲಿನ ಅಡಿಕೆ ತೋಟದ ಹತ್ತಿರ ಎಂವೈಎಕ್ಸ್–3148 ನೋಂದಣಿ ಸಂಖ್ಯೆಯ ಎನ್‌ಫೀಲ್ಡ್ ಬುಲೆಟ್ ವಾಹನದಲ್ಲಿ ಅಕ್ರಮವಾಗಿ 128 ಲೀ. ಕಲಬೆರಕೆ ಸೇಂದಿಯನ್ನು ಹೊಂದಿ, ಸಾಗಾಣಿಕೆ ಮಾಡುತ್ತಿದ್ದ ಆರೋಪಕ್ಕಾಗಿ ವಾಹನ ಮತ್ತು ಸೇಂದಿಯನ್ನು ಜಪ್ತುಗೊಳಿಸಿ, ಆರೋಪಿಯನ್ನು ಪತ್ತೆಹಚ್ಚಿ ದಸ್ತಗಿರಿ ಮಾಡಬೇಕಾಗಿರುವುದಾಗಿ ಪ್ರಥಮ ಮಾಹಿತಿ ವರದಿ ಸಂಖ್ಯೆ:01/2009–10ರಲ್ಲಿ ಕರ್ನಾಟಕ

ಅಬಕಾರಿ ಕಾಯಿದೆ 1965ರ ಕಲಂ 11, 13, 14ರ ರೀತ್ಯಾ ಅಪರಾಧವಾಗಿದ್ದು, ವಿಧಿ 32, 38(ಎ) ಮತ್ತು 43(ಎ)ರ ಪ್ರಕಾರ ಶಿಕ್ಷಾರ್ಹವಾದ್ದರಿಂದ ಮೊಕದ್ದಮೆ ದಾಖಲಿಸಿ, ಮುಂದಿನ ಕ್ರಮಕ್ಕಾಗಿ ಸಂಬಂಧಪಟ್ಟ ದಾಖಲಾತಿಗಳನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುತ್ತಾರೆ.

ವಾಹನದ ಮಾಲೀಕತ್ವದ ವಿವರವುಳ್ಳ 'ಬಿ' ವಹಿಯ ಪ್ರತಿಯನ್ನು ಕೋರಿ, ಮೈಸೂರು ಪೂರ್ವ ಮತ್ತು ಪಶ್ಚಿಮ ಸಾರಿಗೆ ಪ್ರಾದೇಶಿಕ ಅಧಿಕಾರಿಗಳಿಗೆ ದಿನಾಂಕ:16.01.2010ರಂದು ಈ ಪ್ರಾಧಿಕಾರದಿಂದ ಪತ್ರ ಬರೆಯಲಾಗಿರುತ್ತದೆ. ಸದರಿಯವರು ಬಿ ವಹಿಯ ಪ್ರತಿಯನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುತ್ತಾರೆ. ಅದರಂತೆ ವಾಹನವು ಶ್ರೀ ಕೃಷ್ಣಸ್ವಾಮಿ ಬಿನ್ ಪಿ.ಎಂ. ಶ್ರೀನಿವಾಸ ಅಯ್ಯಂಗಾರ್, ಇನ್ಸ್‌ಪೆಕ್ಟರ್ ಆಫ್ ಓರಿಯಂಟಲ್ ಫೈರ್ ಅಂಡ್ ಜನರಲ್ ಇನ್ಸೂರೆನ್ಸ್ ಕಮ್., ಮಂಗಳೂರು ಇವರ ಒಡೆತನದಲ್ಲಿದ್ದು, ಕಲಂ 43(ಬಿ) ರಡಿಯಲ್ಲಿ ಕಾರಣ ಕೇಳುವ ನೋಟೀಸನ್ನು ನೀಡಲಾಗಿರುತ್ತದೆ.

ಲಭ್ಯವಿರುವ ದಾಖಲೆಗಳಂತೆ, ದಿನಾಂಕ:09.12.2009ರಂದು ಇವರು ರತ್ನಪುರಿ ಕಾಲೋನಿಯಿಂದ ಹುಣಸೂರು ಪಟ್ಟಣಕ್ಕೆ ಬರುವ ರಸ್ತೆಯ ಪ್ರಾರಂಭದಲ್ಲಿನ ಅಡಿಕೆ ತೋಟದ ಹತ್ತಿರ ಎಂವೈಎಕ್ಸ್-3148 ನೋಂದಣಿ ಸಂಖ್ಯೆಯ ಎನ್‌ಫೀಲ್ಡ್ ಬುಲೆಟ್ ವಾಹನದಲ್ಲಿ ಅಕ್ರಮವಾಗಿ 128 ಲೀ. ಕಲಬೆರಕೆ ಸೇಂದಿಯನ್ನು ಹೊಂದಿ, ಸಾಗಾಣಿಕೆ ಮಾಡುತ್ತಿದ್ದುದು ಕಂಡುಬಂದಿರುತ್ತದೆ. ಈ ಸಂದರ್ಭದಲ್ಲಿ ಆರೋಪಿಗಳು ಪರಾರಿಯಾಗಿರುತ್ತಾರೆ. ಇದನ್ನು ಸೂಕ್ಷ್ಮವಾಗಿ ಗಮನಿಸಿದಾಗ, ಕಲಂ 32, 34ರ ಅಡಿಯಲ್ಲಿ ತನಿಖಾಧಿಕಾರಿಗಳು ಆರೋಪ ಮಾಡಿದ್ದು, ಪ್ರತಿವಾದಿಯು ತನ್ನ ಮೇಲೆ ಇರತಕ್ಕಂತಹ ಜವಾಬ್ದಾರಿಯನ್ನು ಇದೂವರೆವಿಗೂ ಈ ಪ್ರಾಧಿಕಾರದ ಮುಂದೆ ಹಾಜರಾಗಿ ನಿರೂಪಿಸಿರುವುದಿಲ್ಲ. ಆದ ಕಾರಣ ಈ ಕೃತ್ಯವು ವಾಹನ ಮಾಲೀಕನ ತಿಳುವಳಿಕೆಯಲ್ಲೇ ನಡೆದಿದೆ ಎಂಬುವುದು ಈ ಪ್ರಾಧಿಕಾರಕ್ಕೆ ಮನವರಿಕೆಯಾಗಿರುತ್ತದೆ.

ಈ ಪ್ರಕರಣದಲ್ಲಿ ಆರೋಪಿಯು ಪರಾರಿಯಾಗಿದ್ದು ಇಂತಹ ಮೊಕದ್ದಮೆಗಳಲ್ಲಿ ಪ್ರಕರಣ ದಾಖಲಾದ ಒಂದು ತಿಂಗಳೊಳಗಾಗಿ ವಾಹನದ ಮಾಲೀಕತ್ವವನ್ನು ನಿರೂಪಿಸಲು ಯಾರೊಬ್ಬರೂ ಈ ಪ್ರಾಧಿಕಾರದ ಮುಂದೆ ಹಾಜರಾಗದಿದ್ದಲ್ಲಿ ಅಂತಹ ಅಬಕಾರಿ ವಸ್ತುಗಳನ್ನು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಸಿ)ರ ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಕಾನೂನಿನಲ್ಲಿ ಅವಕಾಶವಿರುತ್ತದೆ.

ಈ ಪ್ರಕರಣ ದಾಖಲಾಗಿ ಈಗಾಗಲೇ ಸುಮಾರು (4) ತಿಂಗಳಿಗೂ ಹೆಚ್ಚು ಕಾಲ ಕಳೆದರೂ ಸಹ ಜಪ್ತಿಯಾದ ವಾಹನವು ತನ್ನದೆಂದಾಗಲೀ, ಈ ಬಗ್ಗೆ ತಾನು ವಿಚಾರಣೆ ನಡೆಸುತ್ತೇನೆ ಎಂದಾಗಲೀ ಯಾರೊಬ್ಬರೂ ಇಂದಿವರೆವಿಗೂ ಖುದ್ದಾಗಿಯಾಗಲೀ, ಅಥವಾ ತನ್ನ ವಕೀಲರ ಮೂಲಕವಾಗಲೀ ಅರ್ಜಿಯನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುವುದಿಲ್ಲ. ವಾಹನ ಮಾಲೀಕರಿಗೆ ಸಾಕಷ್ಟು ದಿನಗಳ ಕಾಲಾವಕಾಶವನ್ನು ನೀಡಿದಾಗಲೂ ಸಹ ಇವರು ಈ ಪ್ರಾಧಿಕಾರದಲ್ಲಿ ತನ್ನ ಹಕ್ಕನ್ನು ಸ್ಥಾಪಿಸದೇ ಇರುವುದರಿಂದ ಸದರಿಯವರು ತನ್ನ ಮೇಲೆ ಹೊರಿಸಿರುವ ಆರೋಪವನ್ನು ಆಪರೋಕ್ಷವಾಗಿ ಒಪ್ಪಿಕೊಂಡಂತಾಗಿದೆ. ಅಲ್ಲದೇ ಈ ಘಟನೆಯು ಸಂಭವಿಸಿದ ದಿನದಂದು ವಾಹನವು ಯಾರ ವಶದಲ್ಲಿತ್ತೋ ಅವರಿಗೆ ಅಥವಾ ವಾಹನ ಮಾಲೀಕರಿಗೆ/ ಏಜೆಂಟರ್ ಗಮನಕ್ಕೆ ಬಾರದೇ ಮತ್ತು ಅವರುಗಳು ಶಾಮೀಲಾಗದೆ ಹಾಗೂ ಅವರೆಲ್ಲರಿಗೂ ಅರಿವಿಲ್ಲದೇ ಈ ಘಟನೆ ನಡೆದಿದೆ ಎಂಬುದನ್ನು ತೃಪ್ತಿಕರವಾಗಿ ಈ ಪ್ರಾಧಿಕಾರದಲ್ಲಿ ನಿರೂಪಿಸಿಲ್ಲವಾದ್ದರಿಂದ ಸದರಿ ವಾಹನವನ್ನು ಇನ್ನೂ ಹಾಗೇ ಇಟ್ಟುಕೊಂಡಲ್ಲಿ ಯಾವುದೇ ಪ್ರಯೋಜನ ಇರದಿರುವುದನ್ನು ಮನಗಂಡು ಅದನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತವೆಂದು ಕಂಡುಬಂದಿರುತ್ತದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ: ಡಿಟಿಸಿಆರ್/174/2009-10, ದಿನಾಂಕ:29ನೇ ಏಪ್ರಿಲ್, 2010**

ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಸಿ)_ ರನ್ವಯ ನನಗೆ ದತ್ತವಾದ ಅಧಿಕಾರವನ್ನು ಚಲಾಯಿಸಿ, ಅಬಕಾರಿ ಉಪ ನಿರೀಕ್ಷಕರು, ಹುಣಸೂರು ವಲಯ ಇವರು ಹೂಡಲಾದ ಪ್ರ.ಮಾ.ವರದಿ ಸಂಖ್ಯೆ:01/2009-10, ದಿನಾಂಕ:09.12.2009ರಂದು ವಶಪಡಿಸಿಕೊಂಡ ಎಂವೈಎಕ್ಸ್-3148 ನೋಂದಣಿ ಸಂಖ್ಯೆಯ ಎನ್‌ಫೀಲ್ಡ್ ಬುಲೆಟ್ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶಿಸಿದೆ.

(ಈ ಆದೇಶವನ್ನು ಇಂದು ಅಂದರೆ 2010ನೇ ಇಸವಿ ಏಪ್ರಿಲ್ ತಿಂಗಳ 29ನೇ ತಾರೀಖಿನಂದು ವಿಷಯ ನಿರ್ವಾಹಕರಿಗೆ ಉಕ್ತಲೇಖನ ನೀಡಿ, ನಂತರ ಗಣಕೀಕೃತಗೊಳಿಸಿ, ತಪ್ಪುಗಳನ್ನು ತಿದ್ದಿ, ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.)

**ಡಾ॥ ವೈ. ಮಂಜುನಾಥ್,**
ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್
ಹಾಗೂ ಅಧಿಕೃತ ಅಧಿಕಾರಿಗಳು,
ಮೈಸೂರು ಜಿಲ್ಲೆ, ಮೈಸೂರು.

ಪಿ.ಆರ್.749

**ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು ಇವರ ನ್ಯಾಯಾಲಯ**

**ಸಂಖ್ಯೆ: ಡಿಟಿಸಿಆರ್:215/2009–10, ದಿನಾಂಕ:15ನೇ ಏಪ್ರಿಲ್, 2010**

**ಉಪಸ್ಥಿತರು:** ಡಾ॥ ವೈ. ಮಂಜುನಾಥ್,

ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್ ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು.

| **ಪಿರ್ಯಾದುದಾರರು:** | **ವಿರುದ್ಧ** | **ಪ್ರತಿವಾದಿ/ ಆರೋಪಿ** |
|---|---|---|
| ಅಬಕಾರಿ ನಿರೀಕ್ಷಕರು, ನಂಜನಗೂಡು ವಲಯ, ನಂಜನಗೂಡು. | | ಬಿ.ಎಲ್. ಜಯಸಿಂಹ<br>ಸಣ್ಣಮಾದಯ್ಯ |

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ:07.01.2010ರಂದು ಬೆಳಿಗ್ಗೆ 9.30 ಗಂಟೆಯ ಸಮಯದಲ್ಲಿ ಅಬಕಾರಿ ನಿರೀಕ್ಷಕರು, ನಂಜನಗೂಡು ವಲಯ ಇವರು ನಂಜನಗೂಡು ಟೌನ್‌ನ ನೀಲಕಂಠನಗರದ ಶ್ರೀ ವಿದ್ಯಾಗಣಪತಿ ಹಿರಿಯ ಪ್ರಾಥಮಿಕ ಶಾಲೆಯ ಮುಂಭಾಗದ ಮೈದಾನದಲ್ಲಿ ಕೆಎ–17/ಎಂ–1588 ನೋಂದಣಿ ಸಂಖ್ಯೆ ಮಾರುತಿ–800 ವಾಹನದಲ್ಲಿ ಅಕ್ರಮವಾಗಿ 75 ಲೀ. ಸೇಂದಿಯನ್ನು ಹೊಂದಿ, ಸಾಗಾಣಿಕೆ ಮಾಡುತ್ತಿದ್ದ ಆರೋಪಕ್ಕಾಗಿ ವಾಹನ ಮತ್ತು ಸೇಂದಿಯನ್ನು ಜಪ್ತುಗೊಳಿಸಿ, ಪ್ರಥಮ ಮಾಹಿತಿ ವರದಿ ಸಂಖ್ಯೆ:03/2009–10ರಲ್ಲಿ ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 11, 13, 14ರ ರೀತ್ಯಾ ಅಪರಾಧವಾಗಿದ್ದು, 32, 38(ಎ) ಮತ್ತು 43ರ ರೀತ್ಯಾ ಶಿಕ್ಷಾರ್ಹವಾದ್ದರಿಂದ ಬಿ.ಎಲ್. ಜಯಸಿಂಹ ಬಿನ್ ಲೇಟ್ ಎಂ.ಬಿ. ಲಿಂಗಯ್ಯ ಮತ್ತು ಸಣ್ಣಮಾದಯ್ಯ ಬಿನ್ ಲೇಟ್ ಮೊಳ್ಳಯ್ಯ, ನಂಜನಗೂಡು ಎಂಬ ಆರೋಪಿಗಳನ್ನು ದಸ್ತಗಿರಿ ಮಾಡಿರುವುದಾಗಿ ಮೊಕದ್ದಮೆ ದಾಖಲಿಸಿ, ಮುಂದಿನ ಕ್ರಮಕ್ಕಾಗಿ ಸಂಬಂಧಪಟ್ಟ ದಾಖಲಾತಿಗಳನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುತ್ತಾರೆ.

ವಾಹನದ ಮಾಲೀಕರಾದ ಜಯಸಿಂಹ ಬಿನ್ ಲೇಟ್ ಲಿಂಗಯ್ಯ, ನಂಜನಗೂಡು ಇವರು ದಿನಾಂಕ:25.01.2010ರಂದು ಅರ್ಜಿ ಸಲ್ಲಿಸಿ ಜಪ್ತುಪಡಿಸಲಾದ ಮಾರುತಿ–800 ವಾಹನವನ್ನು ತನ್ನ ಮಧ್ಯಕಾಲಿನ ಸುಪರ್ದಿಗೆ ಬಿಡುಗಡೆ ಮಾಡಬೇಕೆಂದು ಕೋರಿರುತ್ತಾರೆ.

ವಶಪಡಿಸಿಕೊಂಡ ವಾಹನದ ಮಾಲೀಕತ್ವದ ವಿವರವುಳ್ಳ 'ಬಿ' ವಹಿಯ ಪ್ರತಿಯನ್ನು ಕೋರಿ, ದಾವಣಗೆರೆ ಜಿಲ್ಲೆಯ ಪ್ರಾದೇಶಿಕ ಸಾರಿಗೆ ಅಧಿಕಾರಿಗಳಿಗೆ ದಿನಾಂಕ:22.02.2010ರಂದು ಈ ಪ್ರಾಧಿಕಾರದಿಂದ ಪತ್ರ ಬರೆಯಲಾಗಿರುತ್ತದೆ. ಪ್ರಾದೇಶಿಕ ಸಾರಿಗೆ ಅದಿಕಾರಿಗಳು ಬಿ ವಹಿಯ ಪ್ರತಿಯನ್ನು ಈ ಪ್ರಾಧಿಕಾರಕ್ಕೆ ಕಳುಹಿಸಿರುತ್ತಾರೆ. ಅದರಂತೆ ಶ್ರೀ ಬಿ.ಎಲ್. ಜಯಸಿಂಹ ಬಿನ್ ಎಂ.ಬಿ. ಲಿಂಗಯ್ಯ, ದೇವೀರಮ್ಮನಹಳ್ಳಿ, ನಂಜನಗೂಡು ತಾ: ಇವರ ಒಡೆತನದಲ್ಲಿರುವುದು ದೃಢಪಟ್ಟಿರುತ್ತದೆ. ಸದರಿಯವರಿಗೆ ಈ ಪ್ರಾಧಿಕಾರದಿಂದ ದಿನಾಂಕ:22.03.2010ರಂದು ವಾಹನ ಮತ್ತು ಸೇಂದಿಯನ್ನು ಸರ್ಕಾರಕ್ಕೆ ಏಕೆ ಮುಟ್ಟುಗೋಲು ಹಾಕಿಕೊಳ್ಳಬಾರದೆಂದು ಕಲಂ 43(ಬಿ)ರ ಅಡಿಯಲ್ಲಿ ಕಾರಣ ಕೇಳುವ ನೋಟೀಸ್‌ನ್ನು ನೀಡಲಾಗಿದ್ದು, ದಿನಾಂಕ:08.04.2010ರಂದು ಸಂಬಂಧಪಟ್ಟವರಿಗೆ ಜಾರಿಗೊಳಿಸಿ, ನಂಜನಗೂಡು ವಲಯದ ಅಬಕಾರಿ ನಿರೀಕ್ಷಕರು ದಿನಾಂಕ:22.03.2010ರಂದು ಈ ಪ್ರಾಧಿಕಾರಕ್ಕೆ ವರದಿ ಮಾಡಿರುತ್ತಾರೆ.

ಲಭ್ಯವಿರುವ ದಾಖಲೆಗಳನ್ನು ಪರಿಶೀಲಿಸಲಾಯಿತು. ದಿನಾಂಕ:07.01.2010ರಂದು ನಂಜನಗೂಡು ಟೌನ್‌ನ ನೀಲಕಂಠನಗರದ ಶ್ರೀ ವಿದ್ಯಾಗಣಪತಿ ಹಿರಿಯ ಪ್ರಾಥಮಿಕ ಶಾಲೆಯ ಮುಂಭಾಗದ ಮೈದಾನದಲ್ಲಿ ಕೆಎ–17–ಎಂ–1588 ನೋಂದಣಿ ಸಂಖ್ಯೆಯ ಮಾರುತಿ–800 ವಾಹನದಲ್ಲಿ ಅಕ್ರಮವಾಗಿ 75 ಲೀ. ಸೇಂದಿಯನ್ನು ಹೊಂದಿ, ಸಾಗಾಣಿಕೆ ಮಾಡುತ್ತಿದ್ದುದು ಕಂಡುಬಂದಿರುತ್ತದೆ. ಈ ಸಂದರ್ಭದಲ್ಲಿ ಆರೋಪಿಗಳಾದ ಬಿ.ಎಲ್. ಜಯಸಿಂಹ ಮತ್ತು ಸಣ್ಣಮಾದಯ್ಯ ಇವರುಗಳನ್ನು ದಸ್ತಗಿರಿಗೊಳಿಸಲಾಗಿರುತ್ತದೆ. ಕೃತ್ಯ ನಡೆದ ದಿನದಂದು ವಾಹನ ಮಾಲೀಕರಾದ ಬಿ.ಎಲ್. ಜಯಸಿಂಹ ಇವರು ಅಕ್ರಮವಾಗಿ ಸೇಂದಿಯನ್ನು ಸಾಗಾಣಿಕೆ ಮಾಡುವ ಸಂಬಂಧ ಅಬಕಾರಿ ಅಧಿಕಾರಿಗಳಿಗೆ ವಾಹನ ಮತ್ತು ಸೇಂದಿಯೊಂದಿಗೆ ಸಿಕ್ಕಿಬಿದ್ದಿರುವುದರಿಂದ ಈತನ ತಿಳುವಳಿಕೆಯಲ್ಲೇ ಈ ಕೃತ್ಯವು ನಡೆದಿರುವುದು ಸ್ಪಷ್ಟವಾಗಿ ಕಂಡುಬಂದಿರುತ್ತದೆ. ಹಾಗೂ ಈ ಪ್ರಕರಣದಲ್ಲಿ ದಿನಾಂಕ:25.01.2010ರಂದು ವಾಹನ ಮಾಲೀಕರು ವಾಹನವನ್ನು ತನ್ನ ಸುಪರ್ದಿಗೆ ಬಿಡುಗಡೆ ಮಾಡಿಕೊಡಬೇಕೆಂದು ಅರ್ಜಿಯನ್ನು ಸಲ್ಲಿಸಿರುತ್ತಾರೆ. ವಾಹನ ಮಾಲೀಕ ಮತ್ತು ಆರೋಪಿ ಒಬ್ಬನೇ ಆಗಿರುವುದರಿಂದ ತನ್ನ ಮೇಲೆ ಇರತಕ್ಕಂತಹ ಜವಾಬ್ದಾರಿಯನ್ನು ಇದುವರೆವಿಗೂ ಈ ಪ್ರಾಧಿಕಾರದ ಮುಂದೆ ಹಾಜರಾಗಿ ಸ್ಪಷ್ಟವಾಗಿ ನಿರೂಪಿಸಿರುವುದಿಲ್ಲವಾದರಿಂದ ಸದರಿ ವಾಹನವನ್ನು ಅರ್ಜಿದಾರರ ಸುಪರ್ದಿಗೆ ಬಿಡುಗಡೆ ಮಾಡುವುದು ಸಮಂಜಸವಲ್ಲವೆಂದು

ತೀರ್ಮಾನಿಸಿ, ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತವೆಂದು ಕಂಡುಬಂದಿರುತ್ತದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ: ಡಿಟಿಸಿಆರ್/215/2009–10, ದಿನಾಂಕ:29ನೇ ಏಪ್ರಿಲ್, 2010**

ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಬಿ)ರ ಪ್ರಕಾರ ಅನುಸರಿಸಬೇಕಾದ ಕ್ರಮಗಳನ್ನೆಲ್ಲಾ ಅನುಸರಿಸಿದ ನಂತರ ಕಲಂ 43(ಎ) (2)ರನ್ವಯ ನನಗೆ ದತ್ತವಾದ ಅಧಿಕಾರವನ್ನು ಚಲಾಯಿಸಿ, ಅಬಕಾರಿ ನಿರೀಕ್ಷಕರು, ನಂಜನಗೂಡು ವಲಯ ಇವರು ಹೂಡಲಾದ ಪ್ರ.ಮಾ.ವರದಿ ಸಂಖ್ಯೆ:03/2009–10, ದಿನಾಂಕ:07.01.2010ರಂದು ವಶಪಡಿಸಿಕೊಂಡ ಕೆಎ–17–ಎಂ–1588 ನೋಂದಣಿ ಸಂಖ್ಯೆಯ ಮಾರುತಿ–800 ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶಿಸಿದೆ.

(ಈ ಆದೇಶವನ್ನು ಇಂದು ಅಂದರೆ 2010ನೇ ಇಸವಿ ಏಪ್ರಿಲ್ ತಿಂಗಳ 29ನೇ ತಾರೀಖಿನಂದು ವಿಷಯ ನಿರ್ವಾಹಕರಿಗೆ ಉಕ್ತಲೇಖನ ನೀಡಿ, ನಂತರ ಗಣಕೀಕೃತಗೊಳಿಸಿ, ತಪ್ಪುಗಳನ್ನು ತಿದ್ದಿ, ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.)

**ಡಾ॥ ವೈ. ಮಂಜುನಾಥ್,**
ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್
ಹಾಗೂ ಅಧಿಕೃತ ಅಧಿಕಾರಿಗಳು,
ಮೈಸೂರು ಜಿಲ್ಲೆ, ಮೈಸೂರು.

ಪಿ.ಆರ್.750

**ಸಹಾಯಕ ಕಾರ್ಮಿಕ ಆಯುಕ್ತರು ಹಾಗೂ ಉಪಧನ ಪಾವತಿ ಕಾಯ್ದೆಯಡಿ ನಿಯಂತ್ರಣಾಧಿಕಾರಿಯವರ ನ್ಯಾಯಾಲಯ, ವಿಭಾಗ–4, ಬೆಂಗಳೂರು**

**ಸಂಖ್ಯೆ: ಎಎಲ್‌ಸಿ–4/ಪಿಜಿಎ/ಎಸ್.ಆರ್–162/2007–08**

| **ಅರ್ಜಿದಾರರು:** | **ವಿರುದ್ಧ** | **ಪ್ರತಿವಾದಿಗಳು** |
|---|---|---|
| ಶ್ರೀಮತಿ ಮುನಿಲಕ್ಷ್ಮಮ್ಮ ಕೋಂ ಲೇಟ್ ಗೋಪಾಲಪ್ಪ, ಮನೆ ನಂ.1488/1, ವಿನಾಯಕ ರಸ್ತೆ, ಅರೇಬಿಕ್ ಕಾಲೇಜು ಅಂಚೆ, ವೆಂಕಟೇಶಪುರಂ, ಬೆಂಗಳೂರು–45. | | ಮುಖ್ಯ ಸಂಚಾರ ವ್ಯವಸ್ಥಾಪಕರು, ಬಿ.ಎಂ.ಟಿ.ಸಿ. ಕೇಂದ್ರ ಕಛೇರಿಗಳು, ಕೆ.ಹೆಚ್. ರಸ್ತೆ, ಶಾಂತಿನಗರ, ಬೆಂಗಳೂರು–27. |

**ಪ್ರಕಟಣೆ**

ಸಾರ್ವಜನಿಕರಿಗೆ ಹಾಗೂ ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಅರ್ಜಿದಾರರು ಈ ನ್ಯಾಯಾಲಯದಲ್ಲಿ ದಿನಾಂಕ:23.08.2007ರಂದು ಉಪಧನ ಪಾವತಿ ಕಾಯ್ದೆಯಡಿಯಲ್ಲಿ ಅರ್ಜಿಯನ್ನು ಸಲ್ಲಿಸಿ, ಅರ್ಜಿಯಲ್ಲಿ ಅವರ ಪತಿ ಗೋಪಾಲಪ್ಪ, ಇವರು ಪ್ರತಿವಾದಿ ಸಂಸ್ಥೆಯಲ್ಲಿ 28 ವರ್ಷಗಳ ಸೇವೆ ಸಲ್ಲಿಸಿ ದಿನಾಂಕ:31.08.2004 ರಂದು ಸೇವೆಯಿಂದ ನಿವೃತ್ತರಾಗಿ ತದನಂತರ, ದಿನಾಂಕ:15.10.2007ರಂದು ಮರಣ ಹೊಂದಿರುತ್ತಾರೆಂದು ತಿಳಿಸಿ, ಪ್ರತಿವಾದಿಗಳಿಂದ ಕಾನೂನು ರೀತ್ಯ ಬರಬೇಕಾದ ಉಪಧನವನ್ನು ಮೃತರ ವಾರಸುದಾರರಾದ ತಮಗೆ ಕೊಡಿಸಿಕೊಡಬೇಕೆಂದು ಕೋರಿರುತ್ತಾರೆ.

ಸದರಿ ದಾವೆಯ ವಿಚಾರಣೆ ನಡೆಯುತ್ತಿದ್ದು, ಈ ಬಗ್ಗೆ ಆದೇಶ ಹೊರಡಿಸಬೇಕಾಗಿರುವುದರಿಂದ ಮೇಲೆ ಸೂಚಿಸಿರುವ ಅರ್ಜಿಯನ್ನು ಹೊರತುಪಡಿಸಿ (ಜೀವಂತ ಸದಸ್ಯರು) ಬೇರೆ ಯಾರಾದರೂ ಸದರಿ ಕಾರ್ಮಿಕರಿಗೆ ಸಂಬಂಧಿಸಿದ ಶಾಸನಬದ್ಧ ವಾರಸುದಾರರು ಎಂದು ಪರಿಗಣಿಸಲು ಪ್ರಾರ್ಥಿಸುವುದಾದಲ್ಲಿ ಅಂತಹವರು ಈ ಪ್ರಕಟಣೆಯನ್ನು ರಾಜ್ಯ ಪತ್ರದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳನ್ನಾಗಲೀ ಈ ನ್ಯಾಯಾಲಯಕ್ಕೆ ಸಲ್ಲಿಸತಕ್ಕದ್ದೆಂದು ಈ ಮೂಲಕ ಸೂಚಿಸಲಾಗಿದೆ.

ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

ದಿನಾಂಕ:14.07.2010

**ಎ.ಹೆಚ್. ಉಮೇಶ**
ಸಹಾಯಕ ಕಾರ್ಮಿಕ ಆಯುಕ್ತರು ಮತ್ತು
ನಿಯಂತ್ರಣಾಧಿಕಾರಿಗಳು, ಉಪಧನ ಪಾವತಿ
ಕಾಯ್ದೆ, ವಿಭಾಗ–4, ಬೆಂಗಳೂರು.

ಪಿ.ಆರ್.1081

**ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಲಯ, ಬೆಂಗಳೂರು ಗ್ರಾಮಾಂತರ ಜಿಲ್ಲೆ, ತಳ ಮಹಡಿ,**
**ಸಿಟಿ ಸಿವಿಲ್ ನ್ಯಾಯಾಲಯ ಸಂಕೀರ್ಣ, ಬೆಂಗಳೂರು–09**
**ನಂ.ಎಡಿಎಂ:180:2008 ಮತ್ತು ಎಡಿಎಂ:53:2009, ದಿನಾಂಕ:12ನೇ ಜುಲೈ, 2010**
**ಅನಧಿಕೃತ ಗೈರು ಹಾಜರಿ ಬಗ್ಗೆ ಅಂತಿಮ ನೋಟೀಸು**

ಗೆ

ಶ್ರೀ ಎನ್. ಕಿಶೋರ್ ಕುಮಾರ್, ಪ್ರಥಮ ದರ್ಜೆ ಸಹಾಯಕ,
ಸಿವಿಲ್ ಜಡ್ಜ್ ನ್ಯಾಯಾಲಯ, ದೊಡ್ಡಬಳ್ಳಾಪುರ.
ವಾಸಸ್ಥಳ: ನಂ.ಎಫ್.ಬಿ.27, ಹೆಚ್.ಎ.ಎಲ್. ಕಾಲೋನಿ,
ವಿಮಾನಪುರ ಪೋಸ್ಟ್, ಬೆಂಗಳೂರು–560 017.

ಶ್ರೀ ಎನ್. ಕಿಶೋರ್ ಕುಮಾರ್, ಆದ ನೀವು ಪ್ರಥಮ ದರ್ಜೆ ಸಹಾಯಕರಾಗಿ ಸಿವಿಲ್ ಜಡ್ಜ್ ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯ, ಮಾಗಡಿಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ 11.02.2008 ರಿಂದ 04.11.2008 (ಆ ಘಟಕದಿಂದ ಕರ್ತವ್ಯದಿಂದ ಬಿಡುಗಡೆಗೊಂಡ ದಿನಾಂಕ) ರವರೆಗೆ ಯಾವುದೇ ರೀತಿಯ ರಜೆ ಕೋರದೆ ಅನಧಿಕೃತವಾಗಿ ಗೈರು ಹಾಜರಾಗಿರುತ್ತೀರಿ ಎಂದು ಜಿಲ್ಲಾ ನ್ಯಾಯಾಧೀಶರು, ರಾಮನಗರ ಜಿಲ್ಲೆ, ದಿನಾಂಕ:29.1.2008ರ ವರದಿಯಲ್ಲಿ ತಿಳಿಸಿರುತ್ತಾರೆ. ಈ ಬಗ್ಗೆ ಜಿಲ್ಲಾ ನ್ಯಾಯಾಲಯ, ರಾಮನಗರ ರವರಿಂದ ನೀಡಲಾದ ದಿನಾಂಕ:05.07.2008ರ ಕಾರಣ ಕೇಳಿ ನೋಟೀಸ್ ನಿಮಗೆ 11.07.2008ರಂದು ಜಾರಿಯಾಗಿದ್ದರೂ ಸಹ ನೀವು ಯಾವುದೇ ಉತ್ತರ ನೀಡಿರುವುದಿಲ್ಲ.

ಈ ಬಗ್ಗೆ ಈ ಕಛೇರಿಯಿಂದ ನಿಮ್ಮ ಮನೆಯ (ಲಭ್ಯವಿರುವ) ವಿಳಾಸಕ್ಕೆ ಕಳುಹಿಸಲಾದ ದಿನಾಂಕ:15.07.2009ರ ಕಾರಣ ಕೇಳಿ ನೋಟೀಸ್ ಹಾಲಿ ನೀವು ಸದರಿ ವಿಳಾಸದಲ್ಲಿ ವಾಸವಿಲ್ಲವೆಂದು ವಾಪಾಸ್ ಬಂದಿರುತ್ತದೆ.

ಘನ ಉಚ್ಛ ನ್ಯಾಯಾಲಯದ ಆದೇಶ ಸಂಖ್ಯೆ: ಎಲ್.ಸಿ.ಎ.11.255:2007 ದಿನಾಂಕ:20.09.2008ರ ಅನುಸಾರ ರಾಮನಗರ ಜಿಲ್ಲಾ ಘಟಕದಿಂದ ಈ ಜಿಲ್ಲಾ ಘಟಕಕ್ಕೆ ಪುನರ್ ಹಂಚಿಕೆಯಾದ ನೀವು, ಈ ಕಛೇರಿಯ ಆದೇಶ ಸಂಖ್ಯೆ:ಎಡಿಎಂ:171:2007(98) ದಿನಾಂಕ:04.10.2008ರ ಪ್ರಕಾರ ಸಿವಿಲ್ ನ್ಯಾಯಾಧೀಶರು ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯ, ದೊಡ್ಡಬಳ್ಳಾಪುರಕ್ಕೆ ನಿಯುಕ್ತರಾಗಿರುತ್ತೀರಿ.

ಸಿವಿಲ್ ನ್ಯಾಯಾಧೀಶರು, ದೊಡ್ಡಬಳ್ಳಾಪುರರವರು ದಿನಾಂಕ:07.01.2009ರ ಪತ್ರದ ಮೂಲಕ ವರದಿ ಮಾಡಿರುವ ಪ್ರಕಾರ, ನೀವು ದಿನಾಂಕ:07.11.2008ರಂದು ಸಿವಿಲ್ ನ್ಯಾಯಾಲಯ, ದೊಡ್ಡಬಳ್ಳಾಪುರದಲ್ಲಿ ಕರ್ತವ್ಯಕ್ಕೆ ಹಾಜರಾಗಿದ್ದು, ನಂತರ ದಿನಾಂಕ:20.11.2008 ರಿಂದ ಅನಧಿಕೃತವಾಗಿ ಗೈರು ಹಾಜರಾಗಿರುತ್ತೀರಿ. ಈ ಬಗ್ಗೆ ಸಿವಿಲ್ ನ್ಯಾಯಾಲಯ ದೊಡ್ಡಬಳ್ಳಾಪುರರವರು ನೋಂದಾಯಿತ ಅಂಚೆ ಮೂಲಕ ಕಳುಹಿಸಿದ ದಿನಾಂಕ:06.12.2008ರ ಮೆಮೋ (ತಿಳುವಳಿಕೆ ಪತ್ರ) ಜಾರಿಯಾಗಿದ್ದರೂ ಸಹ ನೀವು ಯಾವುದೇ ಉತ್ತರ ನೀಡಿರುವುದಿಲ್ಲ.

ಈ ಬಗ್ಗೆ ಈ ಕಛೇರಿಯಿಂದ ನಿಮ್ಮ ಮನೆಯ (ಲಭ್ಯವಿರುವ) ವಿಳಾಸಕ್ಕೆ ದಿನಾಂಕ:15.07.2009ರ ಕಾರಣ ಕೇಳಿ ನೋಟೀಸ್ ನೋಂದಾಯಿತ ಅಂಚೆ ಮೂಲಕ ಮತ್ತು ದಿನಾಂಕ:10.11.2009ರ ಕಾರಣ ಕೇಳಿ ನೋಟೀಸ್ ಕಛೇರಿಯ ಸಿಬ್ಬಂದಿಯ ಮೂಲಕ ಕಳುಹಿಸಿದ್ದು, ನೀವು ಸದರಿ ವಿಳಾಸದಲ್ಲಿ ವಾಸವಿಲ್ಲವೆಂದು ವಾಪಸ್ ಬಂದಿರುತ್ತದೆ.

ನೀವು ಈ ರೀತಿ ಗೈರು ಹಾಜರಾಗಿರುವುದು ಸೇವಾ ನಿಯಮಾವಳಿಗಳ ಸ್ಪಷ್ಟ ಉಲ್ಲಂಘನೆಯಾಗಿರುತ್ತದೆ. ನಿಮ್ಮ ಗೈರು ಹಾಜರಿಯಿಂದ ನ್ಯಾಯಾಲಯದ ಕಛೇರಿಯು ಮತ್ತು ಸಾರ್ವಜನಿಕ ಕಾರ್ಯಗಳಿಗೆ ಅಡಚಣೆಯಾಗಿರುತ್ತದೆ. ಪರಿವೀಕ್ಷಣಾ ಅವಧಿಯಲ್ಲಿರುವ ನೀವು ಈ ರೀತಿ ದೀರ್ಘ ಕಾಲ ಅನಧಿಕೃತವಾಗಿ ಗೈರು ಹಾಜರಾಗಿರುವುದು ಮತ್ತು ಈ ಬಗ್ಗೆ ಕಛೇರಿಗೆ ಯಾವುದೇ ಮುನ್ಸೂಚನೆ: ಮಾಹಿತಿ ನೀಡದಿರುವುದು ಸರ್ಕಾರಿ ಸೇವೆಯ ಬಗ್ಗೆ ನಿಮಗಿರುವ ನಿರಾಸಕ್ತಿ ಮತ್ತು ಅಸೀಮ ನಿರ್ಲಕ್ಷ್ಯವನ್ನು ತೋರಿಸುತ್ತದೆ.

ಆದ್ದರಿಂದ ಈ ಸೂಚನೆಯು ಪ್ರಕಟಗೊಂಡ 15 ದಿನಗಳ ಒಳಗಾಗಿ ನೀವು ಕರ್ತವ್ಯಕ್ಕೆ ಹಾಜರಾಗಿ, ನಿಮ್ಮ ಅನಧಿಕೃತ ಗೈರು ಹಾಜರಿಯ ಬಗ್ಗೆ ಸೂಕ್ತ ಸಮಜಾಯಿಷಿಯನ್ನು ನೀಡತಕ್ಕದ್ದು, ತಪ್ಪಿದಲ್ಲಿ ನಿಮ್ಮ ವಿರುದ್ಧ ಸೂಕ್ತ ಶಿಸ್ತಿನ ಕ್ರಮವನ್ನು ನಿಯಮಾನುಸಾರ ಏಕಪಕ್ಷೀಯವಾಗಿ ತೆಗೆದುಕೊಳ್ಳಲಾಗುವುದು.

ಜಿಲ್ಲಾ ನ್ಯಾಯಾಧೀಶರು ಹಾಗೂ ಶಿಸ್ತು
ಪ್ರಾಧಿಕಾರ ಇವರ ಆದೇಶದ ಮೇರೆಗೆ

ಪಿ.ಆರ್.1093

**ಎಸ್.ಜಿ. ಇನಾಮದಾರ್**
ಮುಖ್ಯ ಆಡಳಿತಾಧಿಕಾರಿ,
ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಲಯ,
ಬೆಂಗಳೂರು ಗ್ರಾಮಾಂತರ ಜಿಲ್ಲೆ, ಬೆಂಗಳೂರು.

**ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು ಇವರ ನ್ಯಾಯಾಲಯ**

**ಸಂಖ್ಯೆ: ಡಿಟಿಸಿಆರ್:318/2009–10, ದಿನಾಂಕ:29ನೇ ಏಪ್ರಿಲ್, 2010**

**ಉಪಸ್ಥಿತರು:** ಡಾ॥ ವೈ. ಮಂಜುನಾಥ್,

ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್ ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು.

**ಪಿರ್ಯಾದುದಾರರು: ವಿರುದ್ಧ ಪ್ರತಿವಾದಿ/ ಆರೋಪಿ**

ಅಬಕಾರಿ ಉಪ ನಿರೀಕ್ಷಕರು, ಟಿ. ನರಸೀಪುರ ವಲಯ, ಟಿ.ನರಸೀಪುರ. ಆರೋಪಿ ಪರಾರಿ

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ:21.03.2010ರಂದು ಬೆಳಿಗ್ಗೆ 6.45 ಗಂಟೆ ಸಮಯದಲ್ಲಿ ಅಬಕಾರಿ ಉಪ ನಿರೀಕ್ಷಕರು, ಟಿ.ನರಸೀಪುರ ವಲಯ ಇವರು ಟಿ.ನರಸೀಪುರ ತಾಲ್ಲೂಕು, ನಂಜನಗೂಡು ರಸ್ತೆ, ಹೆಳವರಹುಂಡಿ ಮಾರ್ಗದ ರಸ್ತೆಯಲ್ಲಿ ಕೆಎ–02–/ವೈ–4889 ನೋಂದಣಿ ಸಂಖ್ಯೆಯ ಟಿ.ವಿ.ಎಸ್. ಎಕ್ಸೆಲ್ ಸೂಪರ್ ವಾಹನದಲ್ಲಿ ಅಕ್ರಮವಾಗಿ 95 ಲೀ. ಕಲಬೆರಕೆ ಸೇಂದಿಯನ್ನು ಹೊಂದಿ, ಸಾಗಾಣಿಕೆ ಮಾಡುತ್ತಿದ್ದ ಆರೋಪಕ್ಕಾಗಿ ವಾಹನ ಮತ್ತು ಸೇಂದಿಯನ್ನು ಜಪ್ತುಗೊಳಿಸಿ, ಆರೋಪಿಯನ್ನು ಪತ್ತೆಹಚ್ಚಿ ದಸ್ತಗಿರಿ ಮಾಡಬೇಕಾಗಿರುವುದಾಗಿ ಪ್ರಥಮ ಮಾಹಿತಿ ವರದಿ ಸಂಖ್ಯೆ:16/2009–10ರಲ್ಲಿ ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 23 ಹಾಗೂ 11ರ ರೀತ್ಯಾ ಅಪರಾಧವಾಗಿದ್ದು, ವಿಧಿ 32, 38(ಎ) ಮತ್ತು 43(ಎ)ರ ಪ್ರಕಾರ ಶಿಕ್ಷಾರ್ಹವಾದ್ದರಿಂದ ಮೊಕದ್ದಮೆ ದಾಖಲಿಸಿ, ಮುಂದಿನ ಕ್ರಮಕ್ಕಾಗಿ ಸಂಬಂಧಪಟ್ಟ ದಾಖಲಾತಿಗಳನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುತ್ತಾರೆ.

ವಾಹನದ ಮಾಲೀಕತ್ವದ ವಿವರವುಳ್ಳ 'ಬಿ' ವಹಿಯ ಪ್ರತಿಯನ್ನು ಕೋರಿ, ಬೆಂಗಳೂರು ಪಶ್ಚಿಮ ಪ್ರಾದೇಶಿಕ ಸಾರಿಗೆ ಅಧಿಕಾರಿಗಳಿಗೆ ದಿನಾಂಕ:24.04.2010ರಂದು ಈ ಪ್ರಾಧಿಕಾರದಿಂದ ಪತ್ರ ಬರೆಯಲಾಗಿರುತ್ತದೆ.

ಲಭ್ಯವಿರುವ ದಾಖಲೆಗಳಂತೆ, ದಿನಾಂಕ:21.03.2010ರಂದು ಇವರು ಟಿ.ನರಸೀಪುರ ತಾಲ್ಲೂಕು, ನಂಜನಗೂಡು ರಸ್ತೆ, ಹೆಳವರಹುಂಡಿ ಮಾರ್ಗದ ರಸ್ತೆಯಲ್ಲಿ ಕೆಎ–02/ವೈ–4889 ನೋಂದಣಿ ಸಂಖ್ಯೆಯ ಟಿವಿಎಸ್ ಎಕ್ಸೆಲ್ ಸೂಪರ್ ವಾಹನದಲ್ಲಿ ಅಕ್ರಮವಾಗಿ 95 ಲೀ. ಕಲಬೆರಕೆ ಸೇಂದಿಯನ್ನು ಹೊಂದಿ, ಸಾಗಾಣಿಕೆ ಮಾಡುತ್ತಿದ್ದು, ಇದನ್ನು ಸೂಕ್ಷ್ಮವಾಗಿ ಗಮನಿಸಿದಾಗ, ಕಲಂ 32, 34ರ ಅಡಿಯಲ್ಲಿ ತನಿಖಾಧಿಕಾರಿಗಳು ಆರೋಪ ಮಾಡಿದ್ದು, ಪ್ರತಿವಾದಿಯು ತನ್ನ ಮೇಲೆ ಇರತಕ್ಕಂತಹ ಜವಾಬ್ದಾರಿಯನ್ನು ಇದೂವರೆವಿಗೂ ಈ ಪ್ರಾಧಿಕಾರದ ಮುಂದೆ ಹಾಜರಾಗಿ ನಿರೂಪಿಸಿರುವುದಿಲ್ಲ. ಆದ ಕಾರಣ ಈ ಕೃತ್ಯವು ವಾಹನ ಮಾಲೀಕರ ತಿಳುವಳಿಕೆಯಲ್ಲೇ ನಡೆದಿದೆ ಎಂಬುವುದು ಈ ಪ್ರಾಧಿಕಾರಕ್ಕೆ ಮನವರಿಕೆಯಾಗಿರುತ್ತದೆ.

ಈ ಪ್ರಕರಣದಲ್ಲಿ ಆರೋಪಿಯು ಪರಾರಿಯಾಗಿದ್ದು ಇಂತಹ ಮೊಕದ್ದಮೆಗಳಲ್ಲಿ ಪ್ರಕರಣ ದಾಖಲಾದ ಒಂದು ತಿಂಗಳೊಳಗಾಗಿ ವಾಹನದ ಮಾಲೀಕತ್ವವನ್ನು ನಿರೂಪಿಸಲು ಈ ಪ್ರಾಧಿಕಾರದ ಮುಂದೆ ಹಾಜರಾಗದಿದ್ದಲ್ಲಿ ಅಂತಹ ಅಬಕಾರಿ ವಸ್ತುಗಳನ್ನು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಸಿ)ರ ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಕಾನೂನಿನಲ್ಲಿ ಅವಕಾಶವಿರುತ್ತದೆ.

ಈ ಪ್ರಕರಣ ದಾಖಲಾಗಿ ಈಗಾಗಲೇ ಸುಮಾರು (1) ತಿಂಗಳಿಗೂ ಹೆಚ್ಚು ಕಾಲ ಕಳೆದರೂ ಸಹ ಜಪ್ತಿಯಾದ ವಾಹನವು ತನ್ನದೆಂದಾಗಲೀ, ಈ ಬಗ್ಗೆ ತಾನು ವಿಚಾರಣೆ ನಡೆಸುತ್ತೇನೆ ಎಂದಾಗಲೀ ಯಾರೊಬ್ಬರೂ ಇಂದಿನವರೆವಿಗೂ ಖುದ್ದಾಗಿಯಾಗಲೀ, ಅಥವಾ ತನ್ನ ವಕೀಲರ ಮೂಲಕವಾಗಲೀ ಅರ್ಜಿಯನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುವುದಿಲ್ಲ. ವಾಹನ ಮಾಲೀಕರಿಗೆ ಸಾಕಷ್ಟು ದಿನಗಳ ಕಾಲಾವಕಾಶವನ್ನು ನೀಡಿದಾಗಲೂ ಸಹ ಇವರು ಈ ಪ್ರಾಧಿಕಾರದಲ್ಲಿ ತನ್ನ ಹಕ್ಕನ್ನು ಸ್ಥಾಪಿಸದೇ ಇರುವುದರಿಂದ ಸದರಿಯವರು ತನ್ನ ಮೇಲೆ ಹೊರಿಸಿರುವ ಆರೋಪವನ್ನು ಆಪರೋಕ್ಷವಾಗಿ ಒಪ್ಪಿಕೊಂಡಂತಾಗಿದೆ. ಅಲ್ಲದೇ ಈ ಘಟನೆಯು ಸಂಭವಿಸಿದ ದಿನದಂದು ವಾಹನವು ಯಾರ ವಶದಲ್ಲಿತ್ತೋ ಅವರಿಗೆ ಅಥವಾ ವಾಹನ ಮಾಲೀಕರಿಗೆ/ ಏಜೆಂಟರ್ ಗಮನಕ್ಕೆ ಬಾರದೇ ಮತ್ತು ಅವರುಗಳು ಶಾಮೀಲಾಗದೆ ಹಾಗೂ ಅವರೆಲ್ಲರಿಗೂ ಅರಿವಿಲ್ಲದೇ ಈ ಘಟನೆ ನಡೆದಿದೆ ಎಂಬುದನ್ನು ತೃಪ್ತಿಕರವಾಗಿ ಈ ಪ್ರಾಧಿಕಾರದಲ್ಲಿ ನಿರೂಪಿಸಿಲ್ಲವಾದ್ದರಿಂದ ಸದರಿ ವಾಹನವನ್ನು ಇನ್ನೂ ಹಾಗೇ ಇಟ್ಟುಕೊಂಡಲ್ಲಿ ಯಾವುದೇ ಪ್ರಯೋಜನ ಇರದಿರುವುದನ್ನು ಮನಗಂಡು ಅದನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತವೆಂದು ಕಂಡುಬಂದಿರುತ್ತದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ: ಡಿಟಿಸಿಆರ್/318/2009–10, ದಿನಾಂಕ:29ನೇ ಏಪ್ರಿಲ್, 2010**

ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಸಿ)ರನ್ವಯ ನನಗೆ ದತ್ತವಾದ ಅಧಿಕಾರವನ್ನು ಚಲಾಯಿಸಿ, ಅಬಕಾರಿ ಉಪ ನಿರೀಕ್ಷಕರು, ಟಿ.ನರಸೀಪುರ ವಲಯ ಇವರು ಹೂಡಲಾದ ಪ್ರ.ಮಾ.ವರದಿ ಸಂಖ್ಯೆ:16/2009–10, ದಿನಾಂಕ:21.03.2010 ರಂದು ವಶಪಡಿಸಿಕೊಂಡ ಕೆಎ–02/ವೈ–4899 ನೋಂದಣಿ ಸಂಖ್ಯೆಯ ಟಿ.ವಿ.ಎಸ್. ಎಕ್ಸೆಲ್ ಸೂಪರ್ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶಿಸಿದೆ.

(ಈ ಆದೇಶವನ್ನು ಇಂದು ಅಂದರೆ 2010ನೇ ಇಸವಿ ಏಪ್ರಿಲ್ ತಿಂಗಳ 29ನೇ ತಾರೀಖಿನಂದು ವಿಷಯ ನಿರ್ವಾಹಕರಿಗೆ ಉಕ್ತಲೇಖನ ನೀಡಿ, ನಂತರ ಗಣಕೀಕೃತಗೊಳಿಸಿ, ತಪ್ಪುಗಳನ್ನು ತಿದ್ದಿ, ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.)

**ಡಾ॥ ವೈ. ಮಂಜುನಾಥ್,**
ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್
ಹಾಗೂ ಅಧಿಕೃತ ಅಧಿಕಾರಿಗಳು,
ಮೈಸೂರು ಜಿಲ್ಲೆ, ಮೈಸೂರು.

ಪಿ.ಆರ್.751

**ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು ಇವರ ನ್ಯಾಯಾಲಯ**

**ಸಂಖ್ಯೆ: ಡಿಟಿಸಿಆರ್:133/2009–10, ದಿನಾಂಕ:29ನೇ ಏಪ್ರಿಲ್, 2010**

**ಉಪಸ್ಥಿತರು:** ಡಾ॥ ವೈ. ಮಂಜುನಾಥ್,
ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್ ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು.

| **ಪಿರ್ಯಾದುದಾರರು:** | **ವಿರುದ್ಧ** | **ಪ್ರತಿವಾದಿ/ ಆರೋಪಿ** |
|---|---|---|
| ಅಬಕಾರಿ ಉಪ ನಿರೀಕ್ಷಕರು, ಹೆಚ್.ಡಿ.ಕೋಟೆ ವಲಯ, ಹೆಚ್.ಡಿ. ಕೋಟೆ. | | ಆರೋಪಿ ಪರಾರಿ |

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ:11.11.2009ರಂದು ಸಂಜೆ 6.30 ಗಂಟೆ ಸಮಯದಲ್ಲಿ ಅಬಕಾರಿ ಉಪ ನಿರೀಕ್ಷಕರು, ಹೆಚ್.ಡಿ.ಕೋಟೆ ವಲಯ ಇವರು ಹೆಚ್.ಡಿ. ಕೋಟೆ ತಾಲ್ಲೂಕು, ಅಂತರಸಂತೆ ಹೋಬಳಿ, ಸೋಗೇಹಳ್ಳಿಗೆ ಹೊಸಮಾಳ ರಸ್ತೆಯಲ್ಲಿ ಚಾರ್ಸಿಸ್ ಸಂ.A 407 F 930734 ಟಿ.ವಿ.ಎಸ್.50 ವಾಹನದಲ್ಲಿ ಅಕ್ರಮವಾಗಿ 110 ಲೀ. ಸೇಂದಿಯನ್ನು ಹೊಂದಿ, ಸಾಗಾಣಿಕೆ ಮಾಡುತ್ತಿದ್ದ ಆರೋಪಕ್ಕಾಗಿ ವಾಹನ ಮತ್ತು ಸೇಂದಿಯನ್ನು ಜಪ್ತುಗೊಳಿಸಿ, ಆರೋಪಿಯನ್ನು ಪತ್ತೆಹಚ್ಚಿ ದಸ್ತಗಿರಿ ಮಾಡಬೇಕಾಗಿರುವುದಾಗಿ ಪ್ರಥಮ ಮಾಹಿತಿ ವರದಿ ಸಂಖ್ಯೆ:11/2009–10ರಲ್ಲಿ ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 14ರ ರೀತ್ಯಾ ಅಪರಾಧವಾಗಿದ್ದು, ವಿಧಿ 32, 38(ಎ) ಮತ್ತು 43(ಎ)ರ ಪ್ರಕಾರ ಶಿಕ್ಷಾರ್ಹವಾದ್ದರಿಂದ ಮೊಕದ್ದಮೆ ದಾಖಲಿಸಿ, ಮುಂದಿನ ಕ್ರಮಕ್ಕಾಗಿ ಸಂಬಂಧಪಟ್ಟ ದಾಖಲಾತಿಗಳನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುತ್ತಾರೆ.

ವಾಹನದ ಮಾಲೀಕತ್ವದ ವಿವರವುಳ್ಳ 'ಬಿ' ವಹಿಯ ಪ್ರತಿಯನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸುವಂತೆ ಸೂಚಿಸಿ, ಹೆಚ್.ಡಿ. ಕೋಟೆ ವಲಯ ಅಬಕಾರಿ ನಿರೀಕ್ಷಕರಿಗೆ ದಿನಾಂಕ:17.12.2009ರಂದು ಈ ಪ್ರಾಧಿಕಾರದಿಂದ ಪತ್ರ ಬರೆಯಲಾಗಿದ್ದು, ಇದೂವರೆವಿಗೂ ಯಾವುದೇ ಪ್ರತಿಕ್ರಿಯೆ ಬಂದಿರುವುದಿಲ್ಲ.

ಲಭ್ಯವಿರುವ ದಾಖಲೆಗಳಂತೆ, ದಿನಾಂಕ:11.11.2009ರಂದು ಇವರು ಹೆಚ್.ಡಿ. ಕೋಟೆ ತಾ: ಅಂತರಸಂತೆ ಹೋಬಳಿ, ಸೋಗೇಹಳ್ಳಿಗೆ ಹೊಸಮಾಳ ರಸ್ತೆಯಲ್ಲಿ ಚಾರ್ಸಿಸ್ ಸಂ. A 407 F 930734 ಟಿ.ವಿ.ಎಸ್.50 ವಾಹನದಲ್ಲಿ ಅಕ್ರಮವಾಗಿ 110 ಲೀ. ಸೇಂದಿಯನ್ನು ಹೊಂದಿ, ಇದನ್ನು ಸೂಕ್ಷ್ಮವಾಗಿ ಗಮನಿಸಿದಾಗ, ಕಲಂ 32, 34ರ ಅಡಿಯಲ್ಲಿ ತನಿಖಾಧಿಕಾರಿಗಳು ಆರೋಪ ಮಾಡಿದ್ದು, ಪ್ರತಿವಾದಿಯು ತನ್ನ ಮೇಲೆ ಇರತಕ್ಕಂತಹ ಜವಾಬ್ದಾರಿಯನ್ನು ಇದೂವರೆವಿಗೂ ಈ ಪ್ರಾಧಿಕಾರದ ಮುಂದೆ ಹಾಜರಾಗಿ ನಿರೂಪಿಸಿರುವುದಿಲ್ಲ. ಆದ ಕಾರಣ ಈ ಕೃತ್ಯವು ವಾಹನ ಮಾಲೀಕನ ತಿಳುವಳಿಕೆಯಲ್ಲೇ ನಡೆದಿದೆ ಎಂಬುವುದು ಈ ಪ್ರಾಧಿಕಾರಕ್ಕೆ ಮನವರಿಕೆಯಾಗಿರುತ್ತದೆ.

ಈ ಪ್ರಕರಣದಲ್ಲಿ ಆರೋಪಿಯು ಪರಾರಿಯಾಗಿದ್ದು ಇಂತಹ ಮೊಕದ್ದಮೆಗಳಲ್ಲಿ ಪ್ರಕರಣ ದಾಖಲಾದ ಒಂದು ತಿಂಗಳೊಳಗಾಗಿ ವಾಹನದ ಮಾಲೀಕತ್ವವನ್ನು ನಿರೂಪಿಸಲು ಈ ಪ್ರಾಧಿಕಾರದ ಮುಂದೆ ಹಾಜರಾಗದಿದ್ದಲ್ಲಿ ಅಂತಹ ಅಬಕಾರಿ ವಸ್ತುಗಳನ್ನು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಸಿ)ರ ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಕಾನೂನಿನಲ್ಲಿ ಅವಕಾಶವಿರುತ್ತದೆ.

ಈ ಪ್ರಕರಣ ದಾಖಲಾಗಿ ಈಗಾಗಲೇ ಸುಮಾರು (5) ತಿಂಗಳಿಗೂ ಹೆಚ್ಚು ಕಾಲ ಕಳೆದರೂ ಸಹ ಜಪ್ತಿಯಾದ ವಾಹನವು ತನ್ನದೆಂದಾಗಲೀ, ಈ ಬಗ್ಗೆ ತಾನು ವಿಚಾರಣೆ ನಡೆಸುತ್ತೇನೆ ಎಂದಾಗಲೀ ಯಾರೊಬ್ಬರೂ ಇಂದಿನವರೆವಿಗೂ ಖುದ್ದಾಗಿಯಾಗಲೀ, ಅಥವಾ ತನ್ನ ವಕೀಲರ ಮೂಲಕವಾಗಲೀ ಅರ್ಜಿಯನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುವುದಿಲ್ಲ. ವಾಹನ ಮಾಲೀಕರಿಗೆ ಸಾಕಷ್ಟು ದಿನಗಳ ಕಾಲಾವಕಾಶವನ್ನು ನೀಡಿದಾಗಲೂ ಸಹ ಇವರು ಈ ಪ್ರಾಧಿಕಾರದಲ್ಲಿ ತನ್ನ ಹಕ್ಕನ್ನು ಸ್ಥಾಪಿಸದೇ ಇರುವುದರಿಂದ ಸದರಿಯವರು ತನ್ನ ಮೇಲೆ ಹೊರಿಸಿರುವ ಆರೋಪವನ್ನು ಆಪರೋಕ್ಷವಾಗಿ ಒಪ್ಪಿಕೊಂಡಂತಾಗಿದೆ. ಅಲ್ಲದೇ ಈ ಘಟನೆಯು ಸಂಭವಿಸಿದ ದಿನದಂದು ವಾಹನವು ಯಾರ ವಶದಲ್ಲಿತ್ತೋ ಅವರಿಗೆ ಅಥವಾ ವಾಹನ ಮಾಲೀಕರಿಗೆ/ ಏಜೆಂಟರ್ ಗಮನಕ್ಕೆ ಬಾರದೇ ಮತ್ತು ಅವರುಗಳು ಶಾಮೀಲಾಗದೆ ಹಾಗೂ ಅವರೆಲ್ಲರಿಗೂ ಅರಿವಿಲ್ಲದೇ ಈ ಘಟನೆ ನಡೆದಿದೆ ಎಂಬುದನ್ನು ತೃಪ್ತಿಕರವಾಗಿ ಈ ಪ್ರಾಧಿಕಾರದಲ್ಲಿ ನಿರೂಪಿಸಿಲ್ಲವಾದ್ದರಿಂದ ಸದರಿ ವಾಹನವನ್ನು ಇನ್ನೂ ಹಾಗೇ ಇಟ್ಟುಕೊಂಡಲ್ಲಿ ಯಾವುದೇ ಪ್ರಯೋಜನ ಇರದಿರುವುದನ್ನು ಮನಗಂಡು ಅದನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತವೆಂದು ಕಂಡುಬಂದಿರುತ್ತದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ: ಡಿಟಿಸಿಆರ್/133/2009–10, ದಿನಾಂಕ:29ನೇ ಏಪ್ರಿಲ್, 2010**

ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಸಿ)ರನ್ವಯ ನನಗೆ ದತ್ತವಾದ ಅಧಿಕಾರವನ್ನು ಚಲಾಯಿಸಿ, ಅಬಕಾರಿ ಉಪ ನಿರೀಕ್ಷಕರು, ಹೆಚ್.ಡಿ.ಕೋಟೆ ವಲಯ ಇವರು ಹೂಡಲಾದ ಪ್ರ.ಮಾ.ವರದಿ ಸಂಖ್ಯೆ:11/2009–10, ದಿನಾಂಕ:11.11.2009 ರಂದು ವಶಪಡಿಸಿಕೊಂಡ ಚಾರ್ಸಿಸ್ ಸಂ.A 407 F 930734 ಟಿ.ವಿ.ಎಸ್.50 ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶಿಸಿದೆ.

(ಈ ಆದೇಶವನ್ನು ಇಂದು ಅಂದರೆ 2010ನೇ ಇಸವಿ ಏಪ್ರಿಲ್ ತಿಂಗಳ 29ನೇ ತಾರೀಖಿನಂದು ವಿಷಯ ನಿರ್ವಾಹಕರಿಗೆ ಉಕ್ತಲೇಖನ ನೀಡಿ, ನಂತರ ಗಣಕೀಕೃತಗೊಳಿಸಿ, ತಪ್ಪುಗಳನ್ನು ತಿದ್ದಿ, ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.)

**ಡಾ॥ ವೈ. ಮಂಜುನಾಥ್,**
ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್
ಹಾಗೂ ಅಧಿಕೃತ ಅಧಿಕಾರಿಗಳು,
ಮೈಸೂರು ಜಿಲ್ಲೆ, ಮೈಸೂರು.

ಪಿ.ಆರ್.752

**ಮಾನ್ಯ 8ನೇ ಎ.ಸಿ.ಎಂ.ಎಂ. ನ್ಯಾಯಾಲಯದ ನ್ಯಾಯಾಧೀಶರವರ ಸನ್ನಿದಾನಕ್ಕೆ ಬೆಂಗಳೂರು ನಗರ**

**ದಿನಾಂಕ:11ನೇ ಜೂನ್, 2010**

**ವಿಷಯ:** ವಾರಸುದಾರರು ಇಲ್ಲದ ವಾಹನಗಳ ವಿವರವನ್ನು ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಿಸಲು ಅನುಮತಿ ನೀಡಲು ಕೋರಿ.

ಮೇಲ್ಕಂಡ ವಿಷಯಕ್ಕೆ ಸಂಬಂಧಪಟ್ಟಂತೆ ಮಾನ್ಯ ನ್ಯಾಯಾಲಯದಲ್ಲಿ ಮನವಿ ಮಾಡಿಕೊಳ್ಳುವುದೇನೆಂದರೆ ಸಂಜಯನಗರ ಪೊಲೀಸ್ ಠಾಣೆಯ ಈ ಕೆಳಕಂಡ ಮೊಕದ್ದಮೆ ಸಂಖ್ಯೆಗಳಲ್ಲಿ ಆರೋಪಿಗಳನ್ನು ದಸ್ತಗಿರಿ ಮಾಡಿ ದ್ವಿಚಕ್ರ ವಾಹನಗಳನ್ನು ಅಮಾನತ್ತುಪಡಿಸಿರುತ್ತೆ. ಸದರಿ ವಾಹನಗಳ ಪತ್ತೆಗಾಗಿ ಎಸ್.ಸಿ.ಆರ್.ಬಿ. ಹಾಗೂ ಬೆಂಗಳೂರು ನಗರದ ಎಲ್ಲಾ ಪೊಲೀಸ್ ಠಾಣೆಗಳಿಗೆ ಈ ಮೇಲ್ ಮುಖೇನ ಸಂದೇಶ ರವಾನಿಸಿದ್ದು ಹಾಗೂ ಸುತ್ತೋಲೆ ಹೊರಡಿಸಿದ್ದರು ಸಹ ವಾರಸುದಾರರು ಪತ್ತೆಯಾಗಿರುವುದಿಲ್ಲ. ಆದುದರಿಂದ ಈ ವಾಹನಗಳ ಮಾಲೀಕರ ಪತ್ತೆಗಾಗಿ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಣೆ ಹೊರಡಿಸಲು ಅನುಮತಿ ನೀಡಲು ಕೋರಿದೆ.

ಗೆಜೆಟ್‌ನಲ್ಲಿ ಪ್ರಕಟಿಸಲು ಅನುಮತಿ ನೀಡಬೇಕಾಗಿರುವ ವಾಹನಗಳ ವಿವರ ಈ ಕೆಳಕಂಡಂತಿರುತ್ತದೆ.

ವಾಹನದ ವಿವರ

| ಕ್ರ. ಸಂ. | ಮೊ.ಸಂ. & ಕಲಂ | ಪಿಎಫ್ ನಂ. | ವಾಹನದ ಹೆಸರು ರಿಜಿಸ್ಟ್ರೇಷನ್ ನಂ. | ಇಂಜಿನ್ & ಚಾಸಿಸ್ ನಂ. |
|---|---|---|---|---|
| 1. | 145/09 u/s 379 IPC | 67/09 | TVS XL Super No. Nil | F97888<br>MD621AD1971 |

| ಕ್ರ. ಸಂ. | ಮೊ.ಸಂ. & ಕಲಂ | ಪಿಎಫ್ ನಂ. | ವಾಹನದ ಹೆಸರು ರಿಜಿಸ್ಟ್ರೇಷನ್ ನಂ. | ಇಂಜಿನ್ & ಚಾಸಿಸ್ ನಂ. |
|---|---|---|---|---|
| 2. | 232/09 u/s 379 IPC | 89/09 | Bajaj Pulsar KA-03-EG | OHUBMC54366, OHU6BMC53327 |
| 3. | 232/09 u/s 379 IPC | 90/09 | Hero Honda CD 100 CKD8271 | C1OF105393, CIOE105767 |
| 4. | 232/09 u/s 379 IPC | 90/09 | Bajaj Pulsar KA-52-E-5571 | MD2DH23NCM71670, DHG8NMO9220 |
| 5. | 97/09 u/s 379 IPC | 62/09 | Bajaj Pulsar KA-41-E-1041 | OHOME6037 DHJBME59198 |
| 6. | 97/09 u/s 379 IPC | 62/09 | Yamaha Motor Cycle CKN640 | IL 1070667, IL 1070667 |
| 7. | 97/09 u/s 379 IPC | 62/09 | Bajaj Pulsar KL-07-Y-1288 | DHUBKA7178, DHEBKA71196 |
| 8. | 147/10 u/s 379 IPC | 29/10 | Honda Dio KA-01Y-293 | JF11E0067909 |
| 9. | 147/10 u/s 379 IPC | 29/10 | TVS Max-100 KA-04-EE-6261 | C9302M534232 09382F478328 |
| 10. | 147/10 u/s 379 IPC | 29/10 | Suzuki Samurai No. Nil | 7112M153183 7112FO97836 |
| 11. | 147/10 u/s 379 IPC | 30/10 | Bajaj Pulsar KA-03-EV-2328 | DHGBMD89987, DHVBMD91282 |
| 12. | 147/10 u/s 379 IPC | 30/10 | Suzuki Max No. Nil | 3607M081958 3607FO75357 |
| 13. | 168/10 u/s 379 IPC | 34/10 | Kinetic Honda KA-03-EE-3911 | 242D59 |
| 14. | 168/10 u/s 379 IPC | 34/10 | Honda Activa KA-02-ES-4161 | JFD8E111445 ME4JF87G58111451 |

Sub-Inspector of Police (Crime),
Sanjaynagar Police Station,
Bangalore-560 094.

PR-1103

**ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು ಇವರ ನ್ಯಾಯಾಲಯ**

**ಸಂಖ್ಯೆ: ಡಿಟಿಸಿಆರ್:123/2009–10, ದಿನಾಂಕ:29ನೇ ಏಪ್ರಿಲ್, 2010**

**ಉಪಸ್ಥಿತರು:** ಡಾ॥ ವೈ. ಮಂಜುನಾಥ್,

ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್ ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು.

| **ಪಿರ್ಯಾದುದಾರರು:** | **ವಿರುದ್ಧ** | **ಪ್ರತಿವಾದಿ/ ಆರೋಪಿ** |
|---|---|---|
| ಅಬಕಾರಿ ಉಪ ನಿರೀಕ್ಷಕರು, ಹೆಚ್.ಡಿ.ಕೋಟೆ ವಲಯ, ಹೆಚ್.ಡಿ. ಕೋಟೆ. | | ಆರೋಪಿ ಪರಾರಿ |

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ:04.11.2009ರಂದು ಮಧ್ಯಾಹ್ನ 12.00 ಗಂಟೆ ಸಮಯದಲ್ಲಿ ಅಬಕಾರಿ ಉಪ ನಿರೀಕ್ಷಕರು, ಹೆಚ್.ಡಿ.ಕೋಟೆ ವಲಯ ಇವರು ಹೆಚ್.ಡಿ. ಕೋಟೆ–ನಾಗನಹಳ್ಳಿ ರಸ್ತೆಯ ಪೆಟ್ಟಿಗೆ ಅಂಗಡಿಯ ಸಮೀಪದ ತಿರುವಿನಲ್ಲಿ ಟಿಎನ್–47/ಎ–4014 ನೋಂದಣಿ ಸಂಖ್ಯೆಯ ಟಿ.ವಿ.ಎಸ್.–50 ಎಕ್ಸೆಲ್ ವಾಹನದಲ್ಲಿ ಅಕ್ರಮವಾಗಿ 40 ಲೀ. ಸೇಂದಿಯನ್ನು ಹೊಂದಿ, ಸಾಗಾಣಿಕೆ ಮಾಡುತ್ತಿದ್ದ ಆರೋಪಕ್ಕಾಗಿ ವಾಹನ ಮತ್ತು ಸೇಂದಿಯನ್ನು ಜಪ್ತುಗೊಳಿಸಿ, ಆರೋಪಿಯನ್ನು ಪತ್ತೆಹಚ್ಚಿ ದಸ್ತಗಿರಿ ಮಾಡಬೇಕಾಗಿರುವುದಾಗಿ ಪ್ರಥಮ ಮಾಹಿತಿ ವರದಿ ಸಂಖ್ಯೆ:10/2009–10ರಲ್ಲಿ ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 14ರ ರೀತ್ಯಾ ಅಪರಾಧವಾಗಿದ್ದು, ವಿಧಿ 32, 37, 38(ಎ) ಮತ್ತು 43(ಎ)ರ ಪ್ರಕಾರ ಶಿಕ್ಷಾರ್ಹವಾದ್ದರಿಂದ ಮೊಕದ್ದಮೆ ದಾಖಲಿಸಿ, ಮುಂದಿನ ಕ್ರಮಕ್ಕಾಗಿ ಸಂಬಂಧಪಟ್ಟ ದಾಖಲಾತಿಗಳನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುತ್ತಾರೆ.

ವಾಹನದ ಮಾಲೀಕತ್ವದ ವಿವರವುಳ್ಳ 'ಬಿ' ವಹಿಯ ಪ್ರತಿಯನ್ನು ಕೋರಿ, ಪ್ರಾದೇಶಿಕ ಆಯುಕ್ತರು, ಚೆನ್ನೈ, ತಮಿಳುನಾಡು ಅಧಿಕಾರಿಗಳಿಗೆ ದಿನಾಂಕ:17.12.2009ರಂದು ಈ ಪ್ರಾಧಿಕಾರದಿಂದ ಪತ್ರ ಬರೆಯಲಾಗಿರುತ್ತದೆ. ಇದೂವರೆವಿಗೂ ಯಾವುದೇ ಪ್ರತಿಕ್ರಿಯೆ ಬಂದಿರುವುದಿಲ್ಲ.

ಲಭ್ಯವಿರುವ ದಾಖಲೆಗಳಂತೆ, ದಿನಾಂಕ:04.11.2009ರಂದು ಇವರು ಹೆಚ್.ಡಿ. ಕೋಟೆ–ನಾಗನಹಳ್ಳಿ ರಸ್ತೆಯ ಪೆಟ್ಟಿಗೆ ಅಂಗಡಿಯ ಸಮೀಪದ ತಿರುವಿನಲ್ಲಿ ಟಿಎನ್–47/ಎ–4014 ನೋಂದಣಿ ಸಂಖ್ಯೆಯ ಟಿವಿಎಸ್–50 ಎಕ್ಸೆಲ್ ವಾಹನದಲ್ಲಿ ಅಕ್ರಮವಾಗಿ 40 ಲೀ. ಸೇಂದಿಯನ್ನು ಹೊಂದಿ ಸಾಗಾಣಿಕೆ ಮಾಡುತ್ತಿದ್ದು, ಇದನ್ನು ಸೂಕ್ಷ್ಮವಾಗಿ ಗಮನಿಸಿದಾಗ, ಕಲಂ 32, 34ರ ಅಡಿಯಲ್ಲಿ ತನಿಖಾಧಿಕಾರಿಗಳು ಆರೋಪ ಮಾಡಿದ್ದು, ಪ್ರತಿವಾದಿಯು ತನ್ನ ಮೇಲೆ ಇರತಕ್ಕಂತಹ ಜವಾಬ್ದಾರಿಯನ್ನು ಇದೂವರೆವಿಗೂ ಈ ಪ್ರಾಧಿಕಾರದ ಮುಂದೆ ಹಾಜರಾಗಿ ನಿರೂಪಿಸಿರುವುದಿಲ್ಲ. ಆದ ಕಾರಣ ಈ ಕೃತ್ಯವು ವಾಹನ ಮಾಲೀಕನ ತಿಳುವಳಿಕೆಯಲ್ಲೇ ನಡೆದಿದೆ ಎಂಬುವುದು ಈ ಪ್ರಾಧಿಕಾರಕ್ಕೆ ಮನವರಿಕೆಯಾಗಿರುತ್ತದೆ.

ಈ ಪ್ರಕರಣದಲ್ಲಿ ಆರೋಪಿಯು ಪರಾರಿಯಾಗಿದ್ದು ಇಂತಹ ಮೊಕದ್ದಮೆಗಳಲ್ಲಿ ಪ್ರಕರಣ ದಾಖಲಾದ ಒಂದು ತಿಂಗಳೊಳಗಾಗಿ ವಾಹನದ ಮಾಲೀಕತ್ವವನ್ನು ನಿರೂಪಿಸಲು ಈ ಪ್ರಾಧಿಕಾರದ ಮುಂದೆ ಹಾಜರಾಗದಿದ್ದಲ್ಲಿ ಅಂತಹ ಅಬಕಾರಿ ವಸ್ತುಗಳನ್ನು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಸಿ)ರ ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಕಾನೂನಿನಲ್ಲಿ ಅವಕಾಶವಿರುತ್ತದೆ.

ಈ ಪ್ರಕರಣ ದಾಖಲಾಗಿ ಈಗಾಗಲೇ ಸುಮಾರು (5) ತಿಂಗಳಿಗೂ ಹೆಚ್ಚು ಕಾಲ ಕಳೆದರೂ ಸಹ ಜಪ್ತಿಯಾದ ವಾಹನವು ತನ್ನದೆಂದಾಗಲೀ, ಈ ಬಗ್ಗೆ ತಾನು ವಿಚಾರಣೆ ನಡೆಸುತ್ತೇನೆ ಎಂದಾಗಲೀ ಯಾರೊಬ್ಬರೂ ಇಂದಿನವರೆವಿಗೂ ಖುದ್ದಾಗಿಯಾಗಲೀ, ಅಥವಾ ತನ್ನ ವಕೀಲರ ಮೂಲಕವಾಗಲೀ ಅರ್ಜಿಯನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುವುದಿಲ್ಲ. ವಾಹನ ಮಾಲೀಕರಿಗೆ ಸಾಕಷ್ಟು ದಿನಗಳ ಕಾಲಾವಕಾಶವನ್ನು ನೀಡಿದಾಗಲೂ ಸಹ ಇವರು ಈ ಪ್ರಾಧಿಕಾರದಲ್ಲಿ ತನ್ನ ಹಕ್ಕನ್ನು ಸ್ಥಾಪಿಸದೇ ಇರುವುದರಿಂದ ಸದರಿಯವರು ತನ್ನ ಮೇಲೆ ಹೊರಿಸಿರುವ ಆರೋಪವನ್ನು ಆಪರೋಕ್ಷವಾಗಿ ಒಪ್ಪಿಕೊಂಡಂತಾಗಿದೆ. ಅಲ್ಲದೇ ಈ ಘಟನೆಯು ಸಂಭವಿಸಿದ ದಿನದಂದು ವಾಹನವು ಯಾರ ವಶದಲ್ಲಿತ್ತೋ ಅವರಿಗೆ ಅಥವಾ ವಾಹನ ಮಾಲೀಕರಿಗೆ/ ಏಜೆಂಟರ್ ಗಮನಕ್ಕೆ ಬಾರದೇ ಮತ್ತು ಅವರುಗಳು ಶಾಮೀಲಾಗದೆ ಹಾಗೂ ಅವರೆಲ್ಲರಿಗೂ ಅರಿವಿಲ್ಲದೇ ಈ ಘಟನೆ ನಡೆದಿದೆ ಎಂಬುದನ್ನು ತೃಪ್ತಿಕರವಾಗಿ ಈ ಪ್ರಾಧಿಕಾರದಲ್ಲಿ ನಿರೂಪಿಸಿಲ್ಲವಾದ್ದರಿಂದ ಸದರಿ ವಾಹನವನ್ನು ಇನ್ನೂ ಹಾಗೇ ಇಟ್ಟುಕೊಂಡಲ್ಲಿ ಯಾವುದೇ ಪ್ರಯೋಜನ ಇರದಿರುವುದನ್ನು ಮನಗಂಡು ಅದನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತವೆಂದು ಕಂಡುಬಂದಿರುತ್ತದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ: ಡಿಟಿಸಿಆರ್/123/2009-10, ದಿನಾಂಕ:29ನೇ ಏಪ್ರಿಲ್, 2010**

ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಸಿ)ರನ್ವಯ ನನಗೆ ದತ್ತವಾದ ಅಧಿಕಾರವನ್ನು ಚಲಾಯಿಸಿ, ಅಬಕಾರಿ ಉಪ ನಿರೀಕ್ಷಕರು, ಹೆಚ್.ಡಿ.ಕೋಟೆ ವಲಯ ಇವರು ಹೂಡಲಾದ ಪ್ರ.ಮಾ.ವರದಿ ಸಂಖ್ಯೆ:10/2009-10, ದಿನಾಂಕ:04.11.2009 ರಂದು ವಶಪಡಿಸಿಕೊಂಡ ಟಿಎನ್-47/ಎ-4014 ನೋಂದಣಿ ಸಂಖ್ಯೆಯ ಟಿ.ವಿ.ಎಸ್.50 ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶಿಸಿದೆ.

(ಈ ಆದೇಶವನ್ನು ಇಂದು ಅಂದರೆ 2010ನೇ ಇಸವಿ ಏಪ್ರಿಲ್ ತಿಂಗಳ 29ನೇ ತಾರೀಖಿನಂದು ವಿಷಯ ನಿರ್ವಾಹಕರಿಗೆ ಉಕ್ತಲೇಖನ ನೀಡಿ, ನಂತರ ಗಣಕೀಕೃತಗೊಳಿಸಿ, ತಪ್ಪುಗಳನ್ನು ತಿದ್ದಿ, ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.)

**ಡಾ॥ ವೈ. ಮಂಜುನಾಥ್,**
ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್
ಹಾಗೂ ಅಧಿಕೃತ ಅಧಿಕಾರಿಗಳು,
ಮೈಸೂರು ಜಿಲ್ಲೆ, ಮೈಸೂರು.

ಪಿ.ಆರ್.753

**ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು ಇವರ ನ್ಯಾಯಾಲಯ**

**ಸಂಖ್ಯೆ: ಡಿಟಿಸಿಆರ್:317/2007-08, ದಿನಾಂಕ:18ನೇ ಮಾರ್ಚ್, 2010**

**ಉಪಸ್ಥಿತರು:** ಡಾ॥ ವೈ. ಮಂಜುನಾಥ್,
ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್ ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು.

| **ಪಿರ್ಯಾದುದಾರರು:** | **ವಿರುದ್ದ** | **ಪ್ರತಿವಾದಿ/ ಆರೋಪಿ** |
|---|---|---|
| ಅಬಕಾರಿ ನಿರೀಕ್ಷಕರು, ಮೈಸೂರು ವಲಯ ಸಂ-1, ಮೈಸೂರು. | | ಆರೋಪಿ ಪರಾರಿ |

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ:23.04.2008ರಂದು ಸಂಜೆ 6.00 ಗಂಟೆ ಸಮಯದಲ್ಲಿ ಅಬಕಾರಿ ನಿರೀಕ್ಷಕರು, ಮೈಸೂರು ವಲಯ ಸಂ-1 ಇವರು ಮೈಸೂರು ತಾಲ್ಲೂಕು, ಕಸಬಾ ಹೋಬಳಿ, ಆಲನಹಳ್ಳಿ ಗ್ರಾಮದಿಂದ ನಾಡನಹಳ್ಳಿ ಗ್ರಾಮಕ್ಕೆ ಹೋಗುವ 15 ಅಡಿ ಅಗಲದ ಡಾಂಬಾರು ರಸ್ತೆಯಲ್ಲಿ ಕೆಎ-09/ಇಎಚ್-7514 ನೋಂದಣಿ ಸಂಖ್ಯೆಯ ಟಿವಿಎಸ್ ಎಕ್ಸೆಲ್ ಸೂಪರ್ ವಾಹನದಲ್ಲಿ ಅಕ್ರಮವಾಗಿ 8.280 ಲೀ. ಮದ್ಯವನ್ನು ಹೊಂದಿ, ಸಾಗಾಣಿಕೆ ಮಾಡುತ್ತಿದ್ದ ಆರೋಪಕ್ಕಾಗಿ ವಾಹನ ಮತ್ತು ಮದ್ಯವನ್ನು ಜಪ್ತುಗೊಳಿಸಿ, ಆರೋಪಿಯನ್ನು ಪತ್ತೆಹಚ್ಚಿ ದಸ್ತಗಿರಿ ಮಾಡಬೇಕಾಗಿರುವುದಾಗಿ ಪ್ರಥಮ ಮಾಹಿತಿ ವರದಿ ಸಂಖ್ಯೆ:04/2007-08ರಲ್ಲಿ ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 14ರ ರೀತ್ಯಾ ಅಪರಾಧವಾಗಿದ್ದು, ವಿಧಿ 32, 38(ಎ) ಮತ್ತು 43(ಎ)ರ ಪ್ರಕಾರ ಶಿಕ್ಷಾರ್ಹವಾದ್ದರಿಂದ ಮೊಕದ್ದಮೆ ದಾಖಲಿಸಿ, ಮುಂದಿನ ಕ್ರಮಕ್ಕಾಗಿ ಸಂಬಂಧಪಟ್ಟ ದಾಖಲಾತಿಗಳನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುತ್ತಾರೆ.

ವಶಪಡಿಸಿಕೊಂಡ ವಾಹನದ ಮಾಲೀಕರಾದ ಶ್ರೀ ಸಿದ್ದಪ್ಪ ಬಿನ್ ಡೊಳ್ಳಯ್ಯ, ಸಂ.871, ಮೆಲ್ಲಹಳ್ಳಿ ಗ್ರಾಮ, ಹಾರೋಹಳ್ಳಿ, ವರುಣಾ ಹೋಬಳಿ, ಮೈಸೂರು ತಾಲ್ಲೂಕು ಇವರು ತಮ್ಮ ವಕೀಲರ ಮುಖೇನ ವಾಹನ ದಾಖಲಾತಿ ಮತ್ತು ವಕಾಲತ್ತಿನೊಂದಿಗೆ ದಿನಾಂಕ:07.07.2008ರಂದು ಅರ್ಜಿಯನ್ನು ಸಲ್ಲಿಸಿ ವಾಹನಕ್ಕೆ ಅಗತ್ಯ ಭದ್ರತೆಯನ್ನು ಪಡೆದು ತನ್ನ ಸುಪರ್ದಿಗೆ ಬಿಡುಗಡೆ ಮಾಡಿಕೊಡಬೇಕೆಂದು ಕೋರಿರುತ್ತಾರೆ.

ಈ ಪ್ರಕರಣದಲ್ಲಿ ಮಾದರಿ ತೆಗೆಯಲಾದ ಮಾದಕ ದ್ರವ್ಯಗಳನ್ನು ಬೆಂಗಳೂರಿನ ಕೇಂದ್ರ ರಾಸಾಯನಿಕ ಪ್ರಯೋಗಾಲಯಕ್ಕೆ ಒಳಪಡಿಸಿ ಸದರಿ ಮಾದಕ ದ್ರವ್ಯಗಳು ಮಾನವ ಸೇವನೆಗೆ ಯೋಗ್ಯವೆಂದು ಹಾಗೂ ಇಥೇಲ್ ಆಲ್ಕೋಹಾಲ್ ಕಂಡು ಬಂದಿರುವುದಾಗಿ ರಾಸಾಯನಿಕ ತಜ್ಞರು ತಮ್ಮ ಅಭಿಪ್ರಾಯವನ್ನು ತಿಳಿಸಿರುತ್ತಾರೆ.

ವಾಹನದ ಮಾಲೀಕತ್ವದ ವಿವರವುಳ್ಳ 'ಬಿ' ವಹಿಯ ಪ್ರತಿಯನ್ನು ಕೋರಿ, ಮೈಸೂರು ಜಿಲ್ಲೆಯ ಪೂರ್ವ ಪ್ರಾದೇಶಿಕ ಸಾರಿಗೆ ಅಧಿಕಾರಿಗಳಿಗೆ ದಿನಾಂಕ:21.07.2008ರಂದು ಈ ಪ್ರಾಧಿಕಾರದಿಂದ ಪತ್ರ ಬರೆಯಲಾಗಿರುತ್ತದೆ. ಇದೂವರೆವಿಗೂ

ಯಾವುದೇ ಪ್ರತಿಕ್ರಿಯೆ ಬಂದಿರುವುದಿಲ್ಲ. ಅರ್ಜಿದಾರರು ಹಾಜರುಪಡಿಸಿರುವ ಆರ್.ಸಿ. ಪುಸ್ತಕದ ನಕಲಿ ಪ್ರತಿಯನ್ವಯ ವಾಹನವು ಶ್ರೀ ಸಿದ್ದಪ್ಪ ಬಿನ್ ಡೊಳ್ಳಯ್ಯ, ಸಂ.871, ಮೆಲ್ಲಹಳ್ಳಿ ಗ್ರಾಮ, ಹಾರೋಹಳ್ಳಿ, ವರುಣಾ ಹೋಬಳಿ, ಮೈಸೂರು ತಾಲ್ಲೂಕು ಇವರ ಒಡೆತನದಲ್ಲಿರುತ್ತದೆ. ಸದರಿಯವರಿಗೆ ಈ ಪ್ರಾಧಿಕಾರದಿಂದ ದಿನಾಂಕ:22.07.2008ರಂದು ವಾಹನ ಮತ್ತು ಮದ್ಯವನ್ನು ಸರ್ಕಾರಕ್ಕೆ ಏಕೆ ಮುಟ್ಟುಗೋಲು ಹಾಕಿಕೊಳ್ಳಬಾರದೆಂದು ಕಲಂ 43(ಬಿ)ರ ಅಡಿಯಲ್ಲಿ ಕಾರಣ ಕೇಳುವ ನೋಟೀಸ್ ಜಾರಿಯಾಗಿ ದಿನಾಂಕ:22.11.2008ರಂದು ಸ್ವೀಕೃತಿಯು ಈ ಪ್ರಾಧಿಕಾರಕ್ಕೆ ಸ್ವೀಕೃತವಾಗಿರುತ್ತದೆ. ಈ ಪ್ರಾಧಿಕಾರದಿಂದ ನೀಡಲಾದ ನೋಟೀಸಿಗೆ ಪ್ರತಿವಾದಿಗಳು ಪ್ರತಿಕ್ರಿಯಿಸಿ ಲಿಖಿತ ಮೂಲಕ ಪ್ರತ್ಯುತ್ತರವನ್ನು ಸಲ್ಲಿಸಲಾಗಿದ್ದು, ತಾನು ರೈತನಾಗಿದ್ದು ಸುಳ್ಳು ಆರೋಪ ಹೊರಿಸಿ ಸುಳ್ಳು ಮೊಕದ್ದಮೆಯನ್ನು ದಾಖಲಿಸಿರುತ್ತಾರೆ. ಅಲ್ಲದೆ ತನಗೆ ತೊಂದರೆ ನೀಡುವ ಉದ್ದೇಶದಿಂದಲೇ ಮೊಕದ್ದಮೆಯನ್ನು ದಾಖಲಿಸಲಾಗಿದ್ದು ಈ ಕಾರಣ ಕೇಳುವ ನೋಟಿಸಿನಲ್ಲಿ ಯಾವುದೇ ಹುರುಳಿಲ್ಲದಿರುವುದರಿಂದ ಹೂಡಿರುವ ದಾವೆಯನ್ನು ವಜಾ ಮಾಡಬೇಕೆಂದು ಕೋರಿರುತ್ತಾರೆ.

ಲಭ್ಯವಿರುವ ದಾಖಲಾತಿಗಳನ್ನು ಪರಿಶೀಲಿಸಲಾಯಿತು. ದಿನಾಂಕ:24.04.2008ರಂದು ಮೈಸೂರು ತಾಲ್ಲೂಕು, ಕಸಬಾ ಹೋಬಳಿ, ಆಲನಹಳ್ಳಿ ಗ್ರಾಮದಿಂದ ನಾಡನಹಳ್ಳಿ ಗ್ರಾಮಕ್ಕೆ ಹೋಗುವ 15 ಅಡಿ ಅಗಲದ ಡಾಂಬಾರು ರಸ್ತೆಯಲ್ಲಿ ಕೆಎ–09/ಇಎಚ್–7514 ನೋಂದಣಿ ಸಂಖ್ಯೆಯ ಟಿವಿಎಸ್ ಎಕ್ಸೆಲ್ ಸೂಪರ್ ವಾಹನದಲ್ಲಿ ಅಕ್ರಮವಾಗಿ 8.280 ಲೀ. ಮದ್ಯವನ್ನು ಹೊಂದಿ, ಸಾಗಾಣಿಕೆ ಮಾಡುತ್ತಿದ್ದುದು ಕಂಡುಬಂದಿರುತ್ತದೆ. ಈ ಸಂದರ್ಭದಲ್ಲಿ ಆರೋಪಿ ಪರಾರಿಯಾಗಿರುತ್ತಾನೆ. ಪ್ರಕರಣ ದಾಖಲಾದ 3 ತಿಂಗಳ ತರುವಾಯ ವಕೀಲರ ಮೂಲಕ ಮನವಿಯನ್ನು ಸಲ್ಲಿಸಿ ವಾಹನವನ್ನು ತನ್ನ ವಶಕ್ಕೆ ಬಿಡುಗಡೆ ಮಾಡಿಕೊಡಬೇಕೆಂದು ಕೋರಲಾಗಿದ್ದು, ಈ ಪ್ರಕರಣದಲ್ಲಿ ನಾನು ಯಾವುದೇ ರೀತಿಯ ಮಾದಕ ದ್ರವ್ಯಗಳನ್ನು ವಾಹನದಲ್ಲಿ ಹೊಂದಿ ಸಾಗಾಣಿಕೆ ಮಾಡಿರುವುದಿಲ್ಲ ಎಂಬುದರ ಬಗ್ಗೆ ಯಾವುದೇ ಸಾಕ್ಷ್ಯ ಪುರಾವೆಗಳನ್ನು ಹಾಜರುಪಡಿಸಿರುವುದಿಲ್ಲ ಹಾಗೂ ತನ್ನ ಇರತಕ್ಕಂತಹ ಜವಾಬ್ದಾರಿಯನ್ನು ಈ ಪ್ರಾಧಿಕಾರದ ಮುಂದೆ ನಿರೂಪಿಸಿರುವುದಿಲ್ಲ.

ಈ ಪ್ರಕರಣ ದಾಖಲಾಗಿ ಈಗಾಗಲೇ ಸುಮಾರು (22) ತಿಂಗಳಿಗೂ ಹೆಚ್ಚು ಕಾಲ ಕಳೆದಿರುತ್ತದೆ. ಸದರಿಯವರು ತನ್ನ ಮೇಲೆ ಹೊರಿಸಿರುವ ಆರೋಪವನ್ನು ಆಪರೋಕ್ಷವಾಗಿ ಒಪ್ಪಿಕೊಂಡಂತಾಗಿದೆ. ಅಲ್ಲದೇ ಈ ಘಟನೆಯು ಸಂಭವಿಸಿದ ದಿನದಂದು ವಾಹನವು ಯಾರ ವಶದಲ್ಲಿತ್ತೋ ಅವರಿಗೆ ಅಥವಾ ವಾಹನ ಮಾಲೀಕರಿಗೆ/ ಏಜೆಂಟರ್ ಗಮನಕ್ಕೆ ಬಾರದೆ ಮತ್ತು ಅವರುಗಳು ಶಾಮೀಲಾಗದೆ ಹಾಗೂ ಅವರೆಲ್ಲರಿಗೂ ಅರಿವಿಲ್ಲದೆ ಈ ಘಟನೆ ನಡೆದಿದೆ ಎಂಬುದನ್ನು ತೃಪ್ತಿಕರವಾಗಿ ಈ ಪ್ರಾಧಿಕಾರದಲ್ಲಿ ನಿರೂಪಿಸಿಲ್ಲವಾದ್ದರಿಂದ ಸದರಿ ವಾಹನವನ್ನು ಇನ್ನೂ ಹಾಗೆ ಇಟ್ಟುಕೊಂಡಲ್ಲಿ ಯಾವುದೇ ಪ್ರಯೋಜನ ಇರದಿರುವುದನ್ನು ಮನಗಂಡು ಅದನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತವೆಂದು ಕಂಡುಬಂದಿರುತ್ತದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ: ಡಿಟಿಸಿಆರ್/317/2009–10, ದಿನಾಂಕ:18ನೇ ಮಾರ್ಚ್, 2010**

ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಬಿ)ರ ಪ್ರಕಾರ ಅನುಸರಿಸಬೇಕಾದ ಕ್ರಮಗಳನ್ನೆಲ್ಲಾ ಅನುಸರಿಸಿದ ನಂತರ ಕಲಂ 43(ಎ) (2) ರನ್ವಯ ನನಗೆ ದತ್ತವಾದ ಅಧಿಕಾರವನ್ನು ಚಲಾಯಿಸಿ, ಅಬಕಾರಿ ನಿರೀಕ್ಷಕರು, ಮೈಸೂರು ವಲಯ–1 ಇವರು ಹೂಡಲಾದ ಪ್ರ.ಮಾ.ವರದಿ ಸಂಖ್ಯೆ:04/2007–08, ದಿನಾಂಕ:24.04.2008ರಂದು ವಶಪಡಿಸಿಕೊಂಡ ಕೆಎ–09/ಇಎಚ್–7514, ನೋಂದಣಿ ಸಂಖ್ಯೆಯ ಟಿವಿಎಸ್ ಎಕ್ಸೆಲ್ ಸೂಪರ್ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶಿಸಿದೆ.

(ಈ ಆದೇಶವನ್ನು ಇಂದು ಅಂದರೆ 2010ನೇ ಇಸವಿ ಮಾರ್ಚ್ ತಿಂಗಳ 18ನೇ ತಾರೀಖಿನಂದು ವಿಷಯ ನಿರ್ವಾಹಕರಿಗೆ ಉಕ್ತಲೇಖನ ನೀಡಿ, ನಂತರ ಗಣಕೀಕೃತಗೊಳಿಸಿ, ತಪ್ಪುಗಳನ್ನು ತಿದ್ದಿ, ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.)

**ಡಾ॥ ವೈ. ಮಂಜುನಾಥ್,**
ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್
ಹಾಗೂ ಅಧಿಕೃತ ಅಧಿಕಾರಿಗಳು,
ಮೈಸೂರು ಜಿಲ್ಲೆ, ಮೈಸೂರು.

ಪಿ.ಆರ್.923

**ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು ಇವರ ನ್ಯಾಯಾಲಯ**

**ಸಂಖ್ಯೆ: ಡಿಟಿಸಿಆರ್:140/2009–10, ದಿನಾಂಕ:13ನೇ ಮೇ, 2010**

**ಉಪಸ್ಥಿತರು:** ಡಾ॥ ವೈ. ಮಂಜುನಾಥ್,

ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್ ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು.

| **ಪಿರ್ಯಾದುದಾರರು:** | **ವಿರುದ್ಧ** | **ಪ್ರತಿವಾದಿ/ ಆರೋಪಿ** |
|---|---|---|
| ಆರಕ್ಷಕ ನಿರೀಕ್ಷಕರು, ಅಬಕಾರಿ ಜಾರಿ ಮತ್ತು ಲಾಟರಿ ಮತ್ತು ನಿಷೇಧ ದಳ, ವಿಶೇಷ ಪೊಲೀಸ್ ಠಾಣೆ, ಮೈಸೂರು. | | ಶೇಖರ ಜೆ. ಬಿನ್ ಜವರಪ್ಪ |

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ:01.03.2010ರಂದು ರಾತ್ರಿ 6.30 ಗಂಟೆ ಸಮಯದಲ್ಲಿ ಆರಕ್ಷಕ ನಿರೀಕ್ಷಕರು, ಅಬಕಾರಿ ಜಾರಿ ಮತ್ತು ಲಾಟರಿ ಮತ್ತು ನಿಷೇಧ ದಳ, ವಿಶೇಷ ಪೊಲೀಸ್ ಠಾಣೆ, ಮೈಸೂರು ನಗರ ಇವರು ಮೈಸೂರು ನಗರ, ಎಸ್.ಡಿ. ಜಯರಾಂ ಬಡಾವಣೆ, ಆಲನಹಳ್ಳಿ ಗೃಹ ನಿರ್ಮಾಣ ಸಂಘ, ಸಾತಗಳ್ಳಿ ಕಡೆಗೆ ಹೋಗುವ ರಿಂಗ್ ರಸ್ತೆಯಲ್ಲಿ ಕೆಎ–05/ಇಕ್ಯೂ–9953 ನೋಂದಣಿ ಸಂಖ್ಯೆಯ ಕೈನೆಟಿಕ್ ಹೊಂಡಾ ವಾಹನದಲ್ಲಿ ಅಕ್ರಮವಾಗಿ 8.640 ಲೀ. ಮದ್ಯವನ್ನು ಹೊಂದಿ, ಸಾಗಾಣಿಕೆ ಮಾಡುತ್ತಿದ್ದ ಆರೋಪಕ್ಕಾಗಿ ವಾಹನ ಮತ್ತು ಮದ್ಯವನ್ನು ಜಪ್ತುಗೊಳಿಸಿ, ಆರೋಪಿಯಾದ ಜೆ.ಶೇಖರ ಬಿನ್ ಜವರಪ್ಪ ಎಂಬುವವನನ್ನು ದಸ್ತಗಿರಿ ಮಾಡಿರುವುದಾಗಿ ಮೊಕದ್ದಮೆ ಸಂಖ್ಯೆ:06/2010ರಲ್ಲಿ ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 32, 34ರ ರೀತ್ಯಾ ಮೊಕದ್ದಮೆ ದಾಖಲಿಸಿ, ಜಪ್ತುಪಡಿಸಲಾದ ವಾಹನ ಮತ್ತು ಮದ್ಯವನ್ನು ಅಬಕಾರಿ ಇಲಾಖೆಗೆ ಹಸ್ತಾಂತರಿಸಲು ದಿನಾಂಕ:05.03.2010ರಂದು ಈ ಪ್ರಾಧಿಕಾರದ ಅನುಮತಿಗಾಗಿ ಕೋರಿರುತ್ತಾರೆ. ಅಂತೆಯೇ ದಿನಾಂಕ:08.03.2010ರಂದು ಮೈಸೂರು ವಲಯ–1ರ ಅಬಕಾರಿ ನಿರೀಕ್ಷಕರಿಗೆ ಹಸ್ತಾಂತರಿಸಲು ಅನುಮತಿ ನೀಡಲಾಗಿರುತ್ತದೆ.

ವಶಪಡಿಸಿಕೊಂಡ ವಾಹನದ ಮಾಲೀಕತ್ವದ ವಿವರವುಳ್ಳ 'ಬಿ' ವಹಿಯ ಪ್ರತಿಯನ್ನು ಕೋರಿ, ಬೆಂಗಳೂರು ಜಿಲ್ಲೆಯ ದಕ್ಷಿಣ ಪ್ರಾದೇಶಿಕ ಸಾರಿಗೆ ಅಧಿಕಾರಿಗಳಿಗೆ ದಿನಾಂಕ:10.03.2010ರಂದು ಈ ಪ್ರಾಧಿಕಾರದಿಂದ ಪತ್ರ ಬರೆಯಲಾಗಿರುತ್ತದೆ. ಸದರಿಯವರು ಬಿ ವಹಿಯ ಪ್ರತಿಯನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುತ್ತಾರೆ. ಅದರಂತೆ ವಾಹನವು ಶ್ರೀ ಆನಂದ್ ಸಂತಾನಂ ಬಿನ್ ಪಿ. ಸಂತಾನಂ, ಫ್ಲಾಟ್ ನಂ.201, 3ನೇ ಮಹಡಿ, 5ನೇ ಫೇಸ್, ರೋಸ್ ಪ್ಲಾಟಿನಂ ಎನ್‌ಕ್ಲೇವ್, 16ನೇ ಕ್ರಾಸ್, ಜೆ.ಪಿ.ನಗರ, ಬೆಂಗಳೂರು ಇವರ ಒಡೆತನದಲ್ಲಿರುವುದು ದೃಢಪಟ್ಟಿರುತ್ತದೆ. ಅದರಂತೆ ಸದರಿ ವಾಹನ ಮಾಲೀಕರಿಗೆ ಕಲಂ 43(ಬಿ) ರಡಿಯಲ್ಲಿ ಕಾರಣ ಕೇಳುವ ನೋಟೀಸ್‌ನ್ನು ನೀಡಲಾಗಿದ್ದು, ನೋಟೀಸ್ ಜಾರಿಯಾಗದೇ ಅಂಚೆ ಇಲಾಖೆಯವರು ಈ ಪ್ರಾಧಿಕಾರಕ್ಕೆ ಹಿಂತಿರುಗಿಸಿರುತ್ತಾರೆ.

ಲಭ್ಯವಿರುವ ದಾಖಲಾತಿಗಳನ್ನು ಪರಿಶೀಲಿಸಲಾಯಿತು. ದಿನಾಂಕ:01.03.2010ರಂದು ಮೈಸೂರು ನಗರ, ಎಸ್.ಡಿ. ಜಯರಾಂ ಬಡಾವಣೆ, ಆಲನಹಳ್ಳಿ ಗೃಹ ನಿರ್ಮಾಣ ಸಂಘ, ಸಾತಗಳ್ಳಿ ಕಡೆಗೆ ಹೋಗುವ ರಿಂಗ್ ರಸ್ತೆಯಲ್ಲಿ ಕೆಎ–05–/ಇಕ್ಯೂ–9953 ನೋಂದಣಿ ಸಂಖ್ಯೆಯ ಕೈನೆಟಿಕ್ ಹೊಂಡಾ ವಾಹನದಲ್ಲಿ ಅಕ್ರಮವಾಗಿ 8.640 ಲೀ. ಮದ್ಯವನ್ನು ಹೊಂದಿ, ಸಾಗಾಣಿಕೆ ಮಾಡುತ್ತಿದ್ದುದು ಕಂಡುಬಂದಿರುತ್ತದೆ. ಈ ಪ್ರಕರಣದಲ್ಲಿ ಶೇಖರ್ ಜೆ. ಬಿನ್ ಜವರಪ್ಪ ಎಂಬ ಆರೋಪಿಯನ್ನು ದಸ್ತಗಿರಿ ಮಾಡಲಾಗಿರುತ್ತದೆ. ವಾಹನ ಮಾಲೀಕರು ತನ್ನ ಮೇಲೆ ಇರತಕ್ಕಂತಹ ಜವಾಬ್ದಾರಿಯನ್ನು ಹಾಗೂ ಈ ಕೃತ್ಯವು ತನ್ನ ತಿಳುವಳಿಕೆಯಲ್ಲಿ ನಡೆದಿಲ್ಲ ಎಂಬುದರ ಬಗ್ಗೆ ಈ ಪ್ರಾಧಿಕಾರದ ಮುಂದೆ ಹಾಜರಾಗಿ ಯಾವುದೇ ಸಾಕ್ಷ್ಯಾಧಾರಗಳನ್ನು ರುಜುವಾತು ಪಡಿಸಿರುವುದಿಲ್ಲ.

ಈ ಪ್ರಕರಣ ದಾಖಲಾಗಿ ಈಗಾಗಲೇ ಸುಮಾರು (2) ತಿಂಗಳಿಗೂ ಹೆಚ್ಚು ಕಾಲ ಕಳೆದರೂ ಸಹ ಜಫ್ತಿಯಾದ ವಾಹನವು ತನ್ನದೆಂದಾಗಲೀ, ಈ ಬಗ್ಗೆ ತಾನು ವಿಚಾರಣೆ ನಡೆಸುತ್ತೇನೆ ಎಂದಾಗಲೀ ಯಾರೊಬ್ಬರೂ ಇಂದಿನವರೆವಿಗೂ ಖುದ್ದಾಗಿಯಾಗಲೀ, ಅಥವಾ ತನ್ನ ವಕೀಲರ ಮೂಲಕವಾಗಲೀ ಅರ್ಜಿಯನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುವುದಿಲ್ಲ. ವಾಹನ ಮಾಲೀಕರುಗಳಿಗೆ ಸಾಕಷ್ಟು ದಿನಗಳ ಕಾಲಾವಕಾಶವನ್ನು ನೀಡಿದಾಗಲೂ ಸಹ ಇವರು ಈ ಪ್ರಾಧಿಕಾರದಲ್ಲಿ ತನ್ನ ಹಕ್ಕನ್ನು ಸ್ಥಾಪಿಸದೇ ಇರುವುದರಿಂದ ಸದರಿಯವರು ತನ್ನ ಮೇಲೆ ಹೊರಿಸಿರುವ ಆರೋಪವನ್ನು ಅಪರೋಕ್ಷವಾಗಿ ಒಪ್ಪಿಕೊಂಡಂತಾಗಿದೆ. ಅಲ್ಲದೇ ಈ ಘಟನೆಯು ಸಂಭವಿಸಿದ ದಿನದಂದು ವಾಹನವು ಯಾರ ವಶದಲ್ಲಿತ್ತೋ ಅವರಿಗೆ ಅಥವಾ ವಾಹನ ಮಾಲೀಕರಿಗೆ/ ಏಜೆಂಟರ್ ಗಮನಕ್ಕೆ ಬಾರದೇ ಮತ್ತು ಅವರುಗಳು ಶಾಮೀಲಾಗದೆ ಹಾಗೂ ಅವರೆಲ್ಲರಿಗೂ ಅರಿವಿಲ್ಲದೇ ಈ ಘಟನೆ ನಡೆದಿದೆ

ಎಂಬುದನ್ನು ತೃಪ್ತಿಕರವಾಗಿ ಈ ಪ್ರಾಧಿಕಾರದಲ್ಲಿ ನಿರೂಪಿಸಿಲ್ಲವಾದ್ದರಿಂದ ಸದರಿ ವಾಹನವನ್ನು ಇನ್ನೂ ಹಾಗೇ ಇಟ್ಟುಕೊಂಡಲ್ಲಿ ಯಾವುದೇ ಪ್ರಯೋಜನ ಇರದಿರುವುದನ್ನು ಮನಗಂಡು ಅದನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತವೆಂದು ಕಂಡುಬಂದಿರುತ್ತದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ: ಡಿಟಿಸಿಆರ್/140/2008–09, ದಿನಾಂಕ:13ನೇ ಮೇ, 2010**

ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಬಿ)ರ ಪ್ರಕಾರ ಅನುಸರಿಸಬೇಕಾದ ಕ್ರಮಗಳನ್ನೆಲ್ಲಾ ಅನುಸರಿಸಿದ ನಂತರ ಕಲಂ 43(ಎ) (2) ರನ್ವಯ ನನಗೆ ದತ್ತವಾದ ಅಧಿಕಾರವನ್ನು ಚಲಾಯಿಸಿ, ಆರಕ್ಷಕ ನಿರೀಕ್ಷಕರು, ಅಬಕಾರಿ ಜಾರಿ ಮತ್ತು ಲಾಟರಿ ಮತ್ತು ನಿಷೇಧ ದಳ, ವಿಶೇಷ ಪೊಲೀಸ್ ಠಾಣೆ, ಮೈಸೂರು ನಗರ ಇವರು ಹೂಡಲಾದ ಪ್ರ.ಮಾ.ವರದಿ ಸಂಖ್ಯೆ:06/2010, ದಿನಾಂಕ:01.03.2010ರಂದು ವಶಪಡಿಸಿಕೊಂಡ ಕೆಎ–09/ಇಕ್ಯೂ–9953 ನೋಂದಣಿ ಸಂಖ್ಯೆಯ ಕೈನೆಟಿಕ್ ಹೊಂಡಾ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶಿಸಿದೆ.

(ಈ ಆದೇಶವನ್ನು ಇಂದು ಅಂದರೆ 2010ನೇ ಇಸವಿ ಮೇ ತಿಂಗಳ 13ನೇ ತಾರೀಖಿನಂದು ವಿಷಯ ನಿರ್ವಾಹಕರಿಗೆ ಉಕ್ತಲೇಖನ ನೀಡಿ, ನಂತರ ಗಣಕೀಕೃತಗೊಳಿಸಿ, ತಪ್ಪುಗಳನ್ನು ತಿದ್ದಿ, ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.)

**ಡಾ॥ ವೈ. ಮಂಜುನಾಥ್,**
ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್
ಹಾಗೂ ಅಧಿಕೃತ ಅಧಿಕಾರಿಗಳು,
ಮೈಸೂರು ಜಿಲ್ಲೆ, ಮೈಸೂರು.

ಪಿ.ಆರ್.957

**ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು ಇವರ ನ್ಯಾಯಾಲಯ**

**ಸಂಖ್ಯೆ: ಡಿಟಿಸಿಆರ್:145/2009–10, ದಿನಾಂಕ:25ನೇ ಮಾರ್ಚ್, 2010**

**ಉಪಸ್ಥಿತರು:** ಡಾ॥ ವೈ. ಮಂಜುನಾಥ್,
ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್ ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು.

| **ಪಿರ್ಯಾದುದಾರರು:** | **ವಿರುದ್ಧ** | **ಪ್ರತಿವಾದಿ/ ಆರೋಪಿ** |
|---|---|---|
| ಅಬಕಾರಿ ಉಪ ನಿರೀಕ್ಷಕರು, ಕೆ.ಆರ್.ನಗರ ವಲಯ, ಕೆ.ಆರ್.ನಗರ. | | ನಿಂಗರಾಜು ಬಿನ್ ಜವರೇಗೌಡ |

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ:20.11.2009ರಂದು ಸಂಜೆ 6.15 ಗಂಟೆ ಸಮಯದಲ್ಲಿ ಅಬಕಾರಿ ಉಪ ನಿರೀಕ್ಷಕರು, ಕೆ.ಆರ್.ನಗರ ವಲಯ ಇವರು ಕೆ.ಆರ್.ನಗರ ತಾ: ಚುಂಚನಕಟ್ಟೆ ಹೋಬಳಿ, ಅಬ್ಬೂರು ಗ್ರಾಮದ ಕಟ್ಟೆಪುರ ಏರಿಯ ಮೇಲೆ ಕೆಎ–09/ಎಲ್–5008 ನೋಂದಣಿ ಸಂಖ್ಯೆಯ ಹೀರೊ ಹೊಂಡಾ ಸಿಡಿ–100 ವಾಹನದಲ್ಲಿ ಅಕ್ರಮವಾಗಿ8.640 ಲೀ. ಮದ್ಯವನ್ನು ಹೊಂದಿ, ಸಾಗಾಣಿಕೆ ಮಾಡುತ್ತಿದ್ದ ಆರೋಪಕ್ಕಾಗಿ ವಾಹನ ಮತ್ತು ಸೇಂದಿಯನ್ನು ಜಪ್ತುಗೊಳಿಸಿ, ಪ್ರಥಮ ಮಾಹಿತಿ ವರದಿ ಸಂಖ್ಯೆ:07/2009–10ರಲ್ಲಿ ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 11, 14ರ ರೀತ್ಯಾ ಅಪರಾಧವಾಗಿದ್ದು, 32, 38(ಎ), 43 ಮತ್ತು 43(ಎ)ರ ರೀತ್ಯಾ ಶಿಕ್ಷಾರ್ಹವಾದ್ದರಿಂದ ನಿಂಗರಾಜು ಬಿನ್ ಜವರೇಗೌಡ ಎಂಬ ಆರೋಪಿಯನ್ನು ದಸ್ತಗಿರಿ ಮಾಡಿರುವುದಾಗಿ ಮೊಕದ್ದಮೆ ದಾಖಲಿಸಿ, ಮುಂದಿನ ಕ್ರಮಕ್ಕಾಗಿ ಸಂಬಂಧಪಟ್ಟ ದಾಖಲಾತಿಗಳನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುತ್ತಾರೆ.

ವಶಪಡಿಸಿಕೊಂಡ ವಾಹನದ ಮಾಲೀಕತ್ವದ ವಿವರವುಳ್ಳ 'ಬಿ' ವಹಿಯ ಪ್ರತಿಯನ್ನು ಕೋರಿ, ಮೈಸೂರು ಜಿಲ್ಲೆಯ ಪೂರ್ವ ಪ್ರಾದೇಶಿಕ ಸಾರಿಗೆ ಅಧಿಕಾರಿಗಳಿಗೆ ದಿನಾಂಕ:17.12.2009ರಂದು ಈ ಪ್ರಾಧಿಕಾರದಿಂದ ಪತ್ರ ಬರೆಯಲಾಗಿರುತ್ತದೆ. ಕೆ.ಆರ್.ನಗರ ವಲಯದ ಅಬಕಾರಿ ನಿರೀಕ್ಷಕರು ವಾಹನ ಮಾಲೀಕತ್ವದ ವಿವರವುಳ್ಳ 'ಬಿ' ವಹಿಯ ಪ್ರತಿಯನ್ನು ಸಂಬಂಧಪಟ್ಟ ಪ್ರಾದೇಶಿಕ ಅಧಿಕಾರಿಗಳಿಂದ ಪಡೆದು ದಿನಾಂಕ:22.02.2010ರಂದು ಈ ಪ್ರಾಧಿಕಾರಕ್ಕೆ ಸಲ್ಲಿಸಿರುತ್ತಾರೆ. ಅದರಂತೆ ವಾಹನವು ಜವರೇಗೌಡ ಬಿನ್ ಲಕ್ಕೆಗೌಡ, ಕೊರಲಹೊಸಹಳ್ಳಿ, ಆಲನಹಳ್ಳಿ ಅಂಚೆ, ಪಿರಿಯಾಪಟ್ಟಣ ತಾ: ಇವರ ಒಡೆತನದಲ್ಲಿರುವುದು ದೃಢಪಟ್ಟಿರುತ್ತದೆ. ಸದರಿಯವರಿಗೆ ಈ ಪ್ರಾಧಿಕಾರದಿಂದ ದಿನಾಂಕ:26.02.2010ರಂದು ವಾಹನ ಮತ್ತು ಮದ್ಯವನ್ನು ಸರ್ಕಾರಕ್ಕೆ ಏಕೆ ಮುಟ್ಟುಗೋಲು ಹಾಕಿಕೊಳ್ಳಬಾರದೆಂದು ಕಲಂ 43(ಬಿ) ರ ಅಡಿಯಲ್ಲಿ ಕಾರಣ ಕೇಳುವ ನೋಟೀಸ್‌ನ್ನು ಜಾರಿಗೊಳಿಸಲು ಸದರಿ ಗ್ರಾಮಕ್ಕೆ ತೆರಳಿದಾಗ ಜವರೇಗೌಡ ಬಿನ್ ಲಕ್ಕೇಗೌಡ ಎಂಬುವವರು ದಿನಾಂಕ:08.04.2009ರಂದು ಮರಣ ಹೊಂದಿದ್ದು,

(ಮರಣ ದೃಢೀಕರಣ ಪತ್ರವನ್ನು ಲಗತ್ತಿಸಿರುತ್ತಾರೆ.) ಅವರ ಮಗನಾದ ಜೆ. ರಮೇಶ್ ಎಂಬುವವರಿಗೆ ಜಾರಿಗೊಳಿಸಿ ದಿನಾಂಕ:15.03.2010ರಂದು ಕೆ.ಆರ್.ನಗರ ವಲಯದ ಅಬಕಾರಿ ನಿರೀಕ್ಷಕರು ಈ ಪ್ರಾಧಿಕಾರಕ್ಕೆ ವರದಿ ಮಾಡಿರುತ್ತಾರೆ.

ಲಭ್ಯವಿರುವ ದಾಖಲಾತಿಗಳನ್ನು ಪರಿಶೀಲಿಸಲಾಯಿತು. ದಿನಾಂಕ:20.11.2009ರಂದು ಕೆ.ಆರ್.ನಗರ ತಾ: ಚುಂಚನಕಟ್ಟೆ ಹೋಬಳಿ, ಅಬ್ಬೂರು ಗ್ರಾಮದ ಕಟ್ಟೆಪುರ ಏರಿಯ ಮೇಲೆ ಕೆಎ–09/ಎಲ್–5008 ನೋಂದಣಿ ಸಂಖ್ಯೆಯ ಹೀರೊ ಹೊಂಡಾ ಸಿಡಿ–100 ವಾಹನದಲ್ಲಿ ಅಕ್ರಮವಾಗಿ 8.640 ಲೀ. ಮದ್ಯವನ್ನು ಹೊಂದಿ, ಸಾಗಾಣಿಕೆ ಮಾಡುತ್ತಿದ್ದುದು ಕಂಡುಬಂದಿರುತ್ತದೆ. ಈ ಸಂದರ್ಭದಲ್ಲಿ ಆರೋಪಿ ನಿಂಗರಾಜು ಬಿನ್ ಜವರೇಗೌಡ ಇವರನ್ನು ದಸ್ತಗಿರಿಗೊಳಿಸಲಾಗಿರುತ್ತದೆ. ವಾಹನಕ್ಕೆ ಸಂಬಂಧಪಟ್ಟ ಆರೋಪಿಗಳಾಗಲೀ/ ವಾಹನ ಮಾಲೀಕರು ಮೃತಪಟ್ಟಿದ್ದು, ಅವರ ಮಗನಾದ ರಮೇಶ್ ಎಂಬುವವರು ತಮ್ಮ ನಿಲುವು ಏನೆಂಬುದನ್ನು ಮತ್ತು ಮಾಲೀಕರ ಮೇಲೆ ಇರತಕ್ಕಂತಹ ಜವಾಬ್ದಾರಿಯನ್ನು ಇದುವರೆವಿಗೂ ಪ್ರಾಧಿಕಾರದ ಮುಂದೆ ಹಾಜರಾಗಿ ಸ್ಪಷ್ಟವಾಗಿ ನಿರೂಪಿಸಿರುವುದಿಲ್ಲ ಹಾಗೂ ವಾಹನ ಬಿಡುಗಡೆಗಾಗಿ ಪ್ರತಿವಾದಿಗಳ ಕಡೆಯಿಂದ ಯಾವುದೇ ಪ್ರಯತ್ನ ನಡೆಸಿರುವುದಿಲ್ಲ.

ಈ ಪ್ರಕರಣ ದಾಖಲಾಗಿ ಈಗಾಗಲೇ ಸುಮಾರು (3) ತಿಂಗಳಿಗೂ ಹೆಚ್ಚು ಕಾಲ ಕಳೆದರೂ ಸಹ ಜಪ್ತಿಯಾದ ವಾಹನವು ತನ್ನದೆಂದಾಗಲೀ, ಈ ಬಗ್ಗೆ ತಾನು ವಿಚಾರಣೆ ನಡೆಸುತ್ತೇನೆ ಎಂದಾಗಲೀ ಯಾರೊಬ್ಬರೂ ಇಂದಿನವರೆವಿಗೂ ಖುದ್ದಾಗಿಯಾಗಲೀ, ಅಥವಾ ತನ್ನ ವಕೀಲರ ಮೂಲಕವಾಗಲೀ ಅರ್ಜಿಯನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುವುದಿಲ್ಲ. ವಾಹನ ಮಾಲೀಕರುಗಳಿಗೆ ಸಾಕಷ್ಟು ದಿನಗಳ ಕಾಲಾವಕಾಶವನ್ನು ನೀಡಿದಾಗಲೂ ಸಹ ಇವರು ಈ ಪ್ರಾಧಿಕಾರದಲ್ಲಿ ತನ್ನ ಹಕ್ಕನ್ನು ಸ್ಥಾಪಿಸದೇ ಇರುವುದರಿಂದ ಸದರಿಯವರು ತನ್ನ ಮೇಲೆ ಹೊರಿಸಿರುವ ಆರೋಪವನ್ನು ಆಪರೋಕ್ಷವಾಗಿ ಒಪ್ಪಿಕೊಂಡಂತಾಗಿದೆ. ಅಲ್ಲದೇ ಈ ಘಟನೆಯು ಸಂಭವಿಸಿದ ದಿನದಂದು ವಾಹನವು ಯಾರ ವಶದಲ್ಲಿತ್ತೋ ಅವರಿಗೆ ಅಥವಾ ವಾಹನ ಮಾಲೀಕರಿಗೆ/ ಏಜೆಂಟರ್ ಗಮನಕ್ಕೆ ಬಾರದೇ ಮತ್ತು ಅವರುಗಳು ಶಾಮೀಲಾಗದೆ ಹಾಗೂ ಅವರೆಲ್ಲರಿಗೂ ಅರಿವಿಲ್ಲದೇ ಈ ಘಟನೆ ನಡೆದಿದೆ ಎಂಬುದನ್ನು ತೃಪ್ತಿಕರವಾಗಿ ಈ ಪ್ರಾಧಿಕಾರದಲ್ಲಿ ನಿರೂಪಿಸಿಲ್ಲವಾದ್ದರಿಂದ ಸದರಿ ವಾಹನವನ್ನು ಇನ್ನೂ ಹಾಗೇ ಇಟ್ಟುಕೊಂಡಲ್ಲಿ ಯಾವುದೇ ಪ್ರಯೋಜನ ಇರದಿರುವುದನ್ನು ಮನಗಂಡು ಅದನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತವೆಂದು ಕಂಡುಬಂದಿರುತ್ತದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ: ಡಿಟಿಸಿಆರ್/145/2009–10, ದಿನಾಂಕ:25ನೇ ಮಾರ್ಚ್, 2010**

ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಬಿ)ರ ಪ್ರಕಾರ ಅನುಸರಿಸಬೇಕಾದ ಕ್ರಮಗಳನ್ನೆಲ್ಲಾ ಅನುಸರಿಸಿದ ನಂತರ ಕಲಂ 43(ಎ) (2) ರನ್ವಯ ನನಗೆ ದತ್ತವಾದ ಅಧಿಕಾರವನ್ನು ಚಲಾಯಿಸಿ, ಅಬಕಾರಿ ನಿರೀಕ್ಷಕರು, ಕೆ.ಆರ್.ನಗರ ವಲಯ ಇವರು ಹೂಡಲಾದ ಪ್ರ.ಮಾ. ವರದಿ ಸಂಖ್ಯೆ:07/2009–10, ದಿನಾಂಕ:13.01.2010ರಂದು ವಶಪಡಿಸಿಕೊಂಡ ಕೆಎ–09/ಎಲ್–5008 ನೋಂದಣಿ ಸಂಖ್ಯೆಯ ಹೀರೋ ಹೊಂಡಾ ಸಿಡಿ–100 ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶಿಸಿದೆ.

(ಈ ಆದೇಶವನ್ನು ಇಂದು ಅಂದರೆ 2010ನೇ ಇಸವಿ ಮಾರ್ಚ್ ತಿಂಗಳ 25ನೇ ತಾರೀಖಿನಂದು ವಿಷಯ ನಿರ್ವಾಹಕರಿಗೆ ಉಕ್ತಲೇಖನ ನೀಡಿ, ನಂತರ ಗಣಕೀಕೃತಗೊಳಿಸಿ, ತಪ್ಪುಗಳನ್ನು ತಿದ್ದಿ, ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.)

**ಡಾ॥ ವೈ. ಮಂಜುನಾಥ್,**
ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್
ಹಾಗೂ ಅಧಿಕೃತ ಅಧಿಕಾರಿಗಳು,
ಮೈಸೂರು ಜಿಲ್ಲೆ, ಮೈಸೂರು.

ಪಿ.ಆರ್.958

**ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು ಇವರ ನ್ಯಾಯಾಲಯ**

**ಸಂಖ್ಯೆ: ಡಿಟಿಸಿಆರ್:169/2008–09, ದಿನಾಂಕ:13ನೇ ಮೇ, 2010**

**ಉಪಸ್ಥಿತರು:** ಡಾ॥ ವೈ. ಮಂಜುನಾಥ್,
ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್ ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು.

| **ಪಿರ್ಯಾದುದಾರರು:** | **ವಿರುದ್ಧ** | **ಪ್ರತಿವಾದಿ/ ಆರೋಪಿ** |
|---|---|---|
| ಆರಕ್ಷಕ ಉಪ ನಿರೀಕ್ಷಕರು, ಹೆಚ್.ಡಿ.ಕೋಟೆ ಪೊಲೀಸ್ ಠಾಣೆ, ಹೆಚ್.ಡಿ. ಕೋಟೆ. | | ಚಂದ್ರ ಬಿನ್ ಲೇ: ಕುಮಾರ್<br>ರಫೀಕ್ ಬಿನ್ ಅಬ್ದುಲ್ ಜಬ್ಬರ್ |

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ:30.03.2009ರಂದು ಬೆಳಿಗ್ಗೆ 11.00 ಗಂಟೆ ಸಮಯದಲ್ಲಿ ಆರಕ್ಷಕ ನಿರೀಕ್ಷಕರು, ಅಬಕಾರಿ ಜಾರಿ ಮತ್ತು ಲಾಟರಿ ಮತ್ತು ನಿಷೇಧ ದಳ, ಮೈಸೂರು ಜಿಲ್ಲೆ, ಇವರು ಹೆಚ್.ಡಿ. ಕೋಟೆ ತಾಲ್ಲೂಕಿನ ಗದ್ದಿಗೆ ರಸ್ತೆಯಲ್ಲಿ ಕೆಎ–20/ಎ–6436 ನೋಂದಣಿ ಸಂಖ್ಯೆಯ ಆಟೋ ವಾಹನದಲ್ಲಿ ಅಕ್ರಮವಾಗಿ 5.580 ಲೀ. ಮದ್ಯವನ್ನು ಹೊಂದಿ, ಸಾಗಾಣಿಕೆ ಮಾಡುತ್ತಿದ್ದ ಆರೋಪಕ್ಕಾಗಿ ವಾಹನ ಮತ್ತು ಮದ್ಯವನ್ನು ಜಪ್ತುಗೊಳಿಸಿ, ಚಂದ್ರ ಬಿನ್ ಲೇ: ಕುಮಾರ ಮತ್ತು ರಫೀಕ್ ಬಿನ್ ಅಬ್ದುಲ್ ಜಬ್ಬರ್ ಎಂಬ ಆರೋಪಿಗಳನ್ನು ದಸ್ತಗಿರಿ ಮಾಡಿ, ಮುಂದಿನ ಕ್ರಮ ಜರುಗಿಸಲು ಹೆಚ್.ಡಿ. ಕೋಟೆ ಪೊಲೀಸ್ ಠಾಣೆಯ ಠಾಣಾಧಿಕಾರಿಗಳಿಗೆ ಹಸ್ತಾಂತರಿಸಿ, ಠಾಣಾ ಮೊಕದ್ದಮೆ ಸಂಖ್ಯೆ:82/2009ರಲ್ಲಿ ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 32, 34ರ ರೀತ್ಯಾ ಮೊಕದ್ದಮೆ ದಾಖಲಿಸಿ, ಜಪ್ತುಪಡಿಸಲಾದ ವಾಹನ ಮತ್ತು ಮದ್ಯವನ್ನು ಅಬಕಾರಿ ಇಲಾಖೆಗೆ ಹಸ್ತಾಂತರಿಸಲು ದಿನಾಂಕ:11.06.2009ರಂದು ಈ ಪ್ರಾಧಿಕಾರದ ಅನುಮತಿಗಾಗಿ ಕೋರಿರುತ್ತಾರೆ. ಅಂತೆಯೇ ದಿನಾಂಕ:12.06.2009ರಂದು ಹೆಚ್.ಡಿ.ಕೋಟೆ ವಲಯದ ಅಬಕಾರಿ ನಿರೀಕ್ಷಕರಿಗೆ ಹಸ್ತಾಂತರಿಸಲು ಅನುಮತಿ ನೀಡಲಾಗಿರುತ್ತದೆ.

ವಾಹನದ ಮಾಲೀಕರಾದ ವಾಸು ಬಿನ್ ಮನೋಹರ್, 2ನೇ ಕ್ರಾಸ್, ಹೆಚ್.ಡಿ.ಕೋಟೆ ಇವರು ದಿನಾಂಕ:25.08.2009ರಂದು ತಮ್ಮ ವಕೀಲರ ಮುಖೇನ ವಕಾಲತಿನೊಂದಿಗೆ ಅರ್ಜಿ ಸಲ್ಲಿಸಿ, ಜಪ್ತುಪಡಿಸಲಾದ ಆಟೋ ರಿಕ್ಷಾ ವಾಹನವನ್ನು ತನ್ನ ಮಧ್ಯಕಾಲೀನ ಸುಪರ್ದಿಗೆ ಬಿಡುಗಡೆ ಮಾಡಬೇಕೆಂದು ಕೋರಿರುತ್ತಾರೆ.

ವಶಪಡಿಸಿಕೊಂಡ ವಾಹನದ ಮಾಲೀಕತ್ವದ ವಿವರವುಳ್ಳ 'ಬಿ' ವಹಿಯ ಪ್ರತಿಯನ್ನು ಕೋರಿ, ಹುಣಸೂರು ತಾಲ್ಲೂಕಿನ ಪ್ರಾದೇಶಿಕ ಸಾರಿಗೆ ಅಧಿಕಾರಿಗಳಿಗೆ ದಿನಾಂಕ:17.09.2009ರಂದು ಈ ಪ್ರಾಧಿಕಾರದಿಂದ ಪತ್ರ ಬರೆಯಲಾಗಿರುತ್ತದೆ. ಆದರೆ ಇದೂವರೆವಿಗೂ ಸದರಿಯವರಿಂದ ಯಾವುದೇ ಪ್ರತಿಕ್ರಿಯೆ ಇರುವುದಿಲ್ಲ.

ಲಭ್ಯವಿರುವ ದಾಖಲಾತಿಗಳನ್ನು ಪರಿಶೀಲಿಸಲಾಯಿತು. ದಿನಾಂಕ:30.03.2009ರಂದು ಇವರು ಹೆಚ್.ಡಿ. ಕೋಟೆ ತಾಲ್ಲೂಕಿನ ಗದ್ದಿಗೆ ರಸ್ತೆಯಲ್ಲಿ ಕೆಎ–20/ಎ–6436 ನೋಂದಣಿ ಸಂಖ್ಯೆಯ ಆಟೋ ವಾಹನದಲ್ಲಿ ಅಕ್ರಮವಾಗಿ 5.580 ಲೀ. ಮದ್ಯವನ್ನು ಹೊಂದಿ, ಸಾಗಾಣಿಕೆ ಮಾಡುತ್ತಿದ್ದುದು ಕಂಡುಬಂದಿರುತ್ತದೆ. ಈ ಪ್ರಕರಣದಲ್ಲಿ ಚಂದ್ರ ಬಿನ್ ಲೇ: ಕುಮಾರ ಮತ್ತು ರಫೀಕ್ ಬಿನ್ ಅಬ್ದುಲ್ ಜಬ್ಬರ್ ಎಂಬ ಆರೋಪಿಗಳನ್ನು ದಸ್ತಗಿರಿ ಮಾಡಲಾಗಿರುತ್ತದೆ. ಅರ್ಜಿದಾರರು ತಮ್ಮ ಅರ್ಜಿಯಲ್ಲಿ ಸದರಿ ವಾಹನವನ್ನು ತಮ್ಮ ಮಧ್ಯಕಾಲಿನ ಸುಪರ್ದಿಗೆ ಬಿಡುಗಡೆ ಮಾಡಿಕೊಡಬೇಕೆಂದು ಕೋರಿ ಅರ್ಜಿ ಸಲ್ಲಿಸಿದ್ದು, ವಾಹನವನ್ನು ಬಿಡುಗಡೆ ಮಾಡಿದಲ್ಲಿ ಅರ್ಜಿದಾರರು ಮಾರಾಟ ಮಾಡುವ ಅಡಮಾನ ಮಾಡುವ, ಬಣ್ಣ ಬದಲಾಯಿಸುವ, ಬಿಡಿಭಾಗಗಳನ್ನು ಬದಲಾಯಿಸುವ ಸಾಧ್ಯತೆಗಳಿದ್ದು, ಅಲ್ಲದೆ ಇಂತಹುದೇ ಕೃತ್ಯಕ್ಕೆ ಬಳಸುವ ಸಾಧ್ಯತೆಗಳಿರುವುದರಿಂದ ಹಾಗೂ ಕಲಂ 43(ಬಿ)(2)ರಡಿಯಲ್ಲಿ ಕಾನೂನಿನಲ್ಲಿ ವಿವಿಧ ಜವಾಬ್ದಾರಿಗಳಿದ್ದು ಅದನ್ನು ನಿರ್ವಹಿಸುವ ಆದ್ಯ ಕರ್ತವ್ಯ/ ಜವಾಬ್ದಾರಿ ಅರ್ಜಿದಾರರ ಮೇಲಿದ್ದು ಈ ಕಾರಣದಿಂದಾಗಿ ಆತ ನೇರವಾಗಿ ಈ ಪ್ರಕರಣದಲ್ಲಿ ಭಾಗಿಯಾಗಿಲ್ಲದಿದ್ದರೂ ಕೂಡ ಪರೋಕ್ಷವಾಗಿ ಆತನೇ ಹೊಣೆಗಾರನಾಗಿರುತ್ತಾನೆ.

ಈ ಪ್ರಕರಣ ದಾಖಲಾಗಿ ಈಗಾಗಲೇ ಸುಮಾರು (13) ತಿಂಗಳಿಗೂ ಹೆಚ್ಚು ಕಾಲ ಕಳೆದಿದ್ದು, ಅರ್ಜಿದಾರರು ವಾಹನ ಮಧ್ಯಂತರ ಬಿಡುಗಡೆಗೆ ಅರ್ಜಿಯನ್ನು ಸಲ್ಲಿಸಿರುವುದನ್ನು ಹೊರತುಪಡಿಸಿ, ವಾಹನ ಬಿಡುಗಡೆಗಾಗಿ ಪ್ರತಿವಾದಿಗಳ ಕಡೆಯಿಂದ ಯಾವುದೇ ಪ್ರಯತ್ನ ನಡೆದಿರುವುದಿಲ್ಲ. ಸದರಿಯವರು ತನ್ನ ಮೇಲೆ ಹೊರಿಸಿರುವ ಆರೋಪವನ್ನು ಪರೋಕ್ಷವಾಗಿ ಒಪ್ಪಿಕೊಂಡಂತಾಗಿದೆ. ಅಲ್ಲದೇ ಈ ಘಟನೆಯು ಸಂಭವಿಸಿದ ದಿನದಂದು ವಾಹನವು ಯಾರ ವಶದಲ್ಲಿತ್ತೋ ಅವರಿಗೆ ಅಥವಾ ವಾಹನ ಮಾಲೀಕರಿಗೆ/ ಏಜೆಂಟರ್ ಗಮನಕ್ಕೆ ಬಾರದೇ ಮತ್ತು ಅವರುಗಳು ಶಾಮೀಲಾಗದೆ ಹಾಗೂ ಅವರೆಲ್ಲರಿಗೂ ಅರಿವಿಲ್ಲದೇ ಈ ಘಟನೆ ನಡೆದಿದೆ ಎಂಬುದನ್ನು ತೃಪ್ತಿಕರವಾಗಿ ಈ ಪ್ರಾಧಿಕಾರದಲ್ಲಿ ನಿರೂಪಿಸಿಲ್ಲವಾದ್ದರಿಂದ ಸದರಿ ವಾಹನವನ್ನು ಇನ್ನೂ ಹಾಗೇ ಇಟ್ಟುಕೊಂಡಲ್ಲಿ ಯಾವುದೇ ಪ್ರಯೋಜನ ಇರದಿರುವುದನ್ನು ಮನಗಂಡು ಅದನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತವೆಂದು ಕಂಡುಬಂದಿರುತ್ತದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ: ಡಿಟಿಸಿಆರ್/169/2008–09, ದಿನಾಂಕ:13ನೇ ಮೇ, 2010**

ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಬಿ)ರ ಪ್ರಕಾರ ಅನುಸರಿಸಬೇಕಾದ ಕ್ರಮಗಳನ್ನೆಲ್ಲಾ ಅನುಸರಿಸಿದ ನಂತರ ಕಲಂ 43(ಎ) (2) ರನ್ವಯ ನನಗೆ ದತ್ತವಾದ ಅಧಿಕಾರವನ್ನು ಚಲಾಯಿಸಿ, ಆರಕ್ಷಕ ನಿರೀಕ್ಷಕರು, ಅಬಕಾರಿ ಜಾರಿ ಮತ್ತು ಲಾಟರಿ ಮತ್ತು ನಿಷೇಧ ದಳ, ವಿಶೇಷ ಪೊಲೀಸ್ ಠಾಣೆ, ಮೈಸೂರು ಜಿಲ್ಲೆ, ಇವರು ಹೂಡಲಾದ ಪ್ರ.ಮಾ.ವರದಿ ಸಂಖ್ಯೆ:82/2009, ದಿನಾಂಕ:30.03.2009ರಂದು ವಶಪಡಿಸಿಕೊಂಡ ಕೆಎ–20/ಎ–6436 ನೋಂದಣಿ ಸಂಖ್ಯೆಯ ಆಟೋ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶಿಸಿದೆ.

(ಈ ಆದೇಶವನ್ನು ಇಂದು ಅಂದರೆ 2010ನೇ ಇಸವಿ ಮೇ ತಿಂಗಳ 13ನೇ ತಾರೀಖಿನಂದು ವಿಷಯ ನಿರ್ವಾಹಕರಿಗೆ ಉಕ್ತಲೇಖನ ನೀಡಿ, ನಂತರ ಗಣಕೀಕೃತಗೊಳಿಸಿ, ತಪ್ಪುಗಳನ್ನು ತಿದ್ದಿ, ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.)

**ಡಾ॥ ವೈ. ಮಂಜುನಾಥ್,**
ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್
ಹಾಗೂ ಅಧಿಕೃತ ಅಧಿಕಾರಿಗಳು,
ಮೈಸೂರು ಜಿಲ್ಲೆ, ಮೈಸೂರು.

ಪಿ.ಆರ್.959

**ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು ಇವರ ನ್ಯಾಯಾಲಯ**

**ಸಂಖ್ಯೆ: ಡಿಟಿಸಿಆರ್:120/2009–10, ದಿನಾಂಕ:15ನೇ ಏಪ್ರಿಲ್, 2010**

**ಉಪಸ್ಥಿತರು:** ಡಾ॥ ವೈ. ಮಂಜುನಾಥ್,
ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್ ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು.

| **ಪಿರ್ಯಾದುದಾರರು:** | **ವಿರುದ್ಧ** | **ಪ್ರತಿವಾದಿ/ ಆರೋಪಿ** |
|---|---|---|
| ಅಬಕಾರಿ ನಿರೀಕ್ಷಕರು, ಪಿರಿಯಾಪಟ್ಟಣ ವಲಯ, ಪಿರಿಯಾಪಟ್ಟಣ. | | ಅಜ್ಗರ್ ಪಾಷಾ ಬಿನ್ ಮಹಮ್ಮದ್ ಪಾಷಾ. |

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ:03.11.2009ರಂದು ಬೆಳಿಗ್ಗೆ 9.15 ಗಂಟೆಯ ಸಮಯದಲ್ಲಿ ಅಬಕಾರಿ ನಿರೀಕ್ಷಕರು, ಪಿರಿಯಾಪಟ್ಟಣ ವಲಯ ಇವರು ಪಿರಿಯಾಪಟ್ಟಣ ತಾಲ್ಲೂಕು, ಹಾರನಹಳ್ಳಿ ಹೋಬಳಿಗೆ ಸೇರುವ ದೊಡ್ಡ ಹರವೆ ಗ್ರಾಮದ 2ನೇ ಬ್ಲಾಕ್‌ನ ಊರುಗುಪ್ಪೆಯಲ್ಲಿಯ ಸರ್ಕಾರಿ ಶಾಲೆಯ ಮುಂಭಾಗದ ರಸ್ತೆಯಲ್ಲಿ ಕೆಎ–12/ಎ–0051 ನೋಂದಣಿ ಸಂಖ್ಯೆಯ ಆಟೋ ವಾಹನದಲ್ಲಿ ಅಕ್ರಮವಾಗಿ 25.920 ಲೀ. ಮದ್ಯವನ್ನು ಹೊಂದಿ, ಸಾಗಾಣಿಕೆ ಮಾಡುತ್ತಿದ್ದ ಆರೋಪಕ್ಕಾಗಿ ವಾಹನ ಮತ್ತು ಮದ್ಯವನ್ನು ಜಪ್ತುಗೊಳಿಸಿ, ಪ್ರಥಮ ಮಾಹಿತಿ ವರದಿ ಸಂಖ್ಯೆ:02/2009–10ರಲ್ಲಿ ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 11, 13(ಎ) ಮತ್ತು 14ರ ರೀತ್ಯಾ ಅಪರಾಧವಾಗಿದ್ದು, 32, 38(ಎ) ಮತ್ತು 43ರ ರೀತ್ಯಾ ಶಿಕ್ಷಾರ್ಹವಾದ್ದರಿಂದ ಅಜ್ಗರ್ ಪಾಷಾ ಬಿನ್ ಮಹಮದ್ ಮುಸ್ತಾಫ್ ಎಂಬ ಆರೋಪಿಯನ್ನು ದಸ್ತಗಿರಿ ಮಾಡಿರುವುದಾಗಿ ಮೊಕದ್ದಮೆ ದಾಖಲಿಸಿ, ಮುಂದಿನ ಕ್ರಮಕ್ಕಾಗಿ ಸಂಬಂಧಪಟ್ಟ ದಾಖಲಾತಿಗಳನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುತ್ತಾರೆ.

ವಶಪಡಿಸಿಕೊಂಡ ವಾಹನದ ಮಾಲೀಕತ್ವದ ವಿವರವುಳ್ಳ 'ಬಿ' ವಹಿಯ ಪ್ರತಿಯನ್ನು ಕೋರಿ, ಕೊಡಗು ಜಿಲ್ಲೆಯ ಮಡಿಕೇರಿ ಪ್ರಾದೇಶಿಕ ಸಾರಿಗೆ ಅಧಿಕಾರಿಗಳಿಗೆ ದಿನಾಂಕ:09.11.2009ರಂದು ಈ ಪ್ರಾಧಿಕಾರದಿಂದ ಪತ್ರ ಬರೆಯಲಾಗಿರುತ್ತದೆ. ಪ್ರಾದೇಶಿಕ ಸಾರಿಗೆ ಅಧಿಕಾರಿಗಳು ಬಿ ವಹಿಯ ಪ್ರತಿಯನ್ನು ಈ ಪ್ರಾಧಿಕಾರಕ್ಕೆ ಕಳುಹಿಸಿರುತ್ತಾರೆ. ಅದರಂತೆ ಶ್ರೀ ಮಂಜು ಆರ್. ಬಿನ್ ರಾಮೇಗೌಡ, ಮುಳ್ಳುಸೋಗೆ ಗ್ರಾಮ ಮತ್ತು ಪೋಸ್ಟ್, ಕುಶಾಲನಗರ, ಸೋಮವಾರಪೇಟೆ ತಾಲ್ಲೂಕು, ಕೊಡಗು ಜಿಲ್ಲೆ ಇವರ ಒಡೆತನದಲ್ಲಿರುವುದು ದೃಢಪಟ್ಟಿರುತ್ತದೆ. ಸದರಿಯವರಿಗೆ ಈ ಪ್ರಾಧಿಕಾರದಿಂದ ದಿನಾಂಕ:14.12.2009ರಂದು ವಾಹನ ಮತ್ತು ಮದ್ಯವನ್ನು ಸರ್ಕಾರಕ್ಕೆ ಏಕೆ ಮುಟ್ಟುಗೋಲು ಹಾಕಿಕೊಳ್ಳಬಾರದೆಂದು ಕಲಂ 43(ಬಿ) ರ ಅಡಿಯಲ್ಲಿ ಕಾರಣ ಕೇಳುವ ನೋಟೀಸನ್ನು ನೀಡಲಾಗಿದ್ದು, ದಿನಾಂಕ:08.03.2010ರಂದು ಸಂಬಂಧಪಟ್ಟವರಿಗೆ ಜಾರಿಗೊಳಿಸಿ, ಪಿರಿಯಾಪಟ್ಟಣ ವಲಯದ ಅಬಕಾರಿ ನಿರೀಕ್ಷಕರು, ದಿನಾಂಕ:26.03.2010ರಂದು ಈ ಪ್ರಾಧಿಕಾರಕ್ಕೆ ವರದಿ ಮಾಡಿರುತ್ತಾರೆ.

ಲಭ್ಯವಿರುವ ದಾಖಲಾತಿಗಳನ್ನು ಪರಿಶೀಲಿಸಲಾಯಿತು. ದಿನಾಂಕ:03.11.2009ರಂದು ಪಿರಿಯಾಪಟ್ಟಣ ತಾಲ್ಲೂಕು, ಹಾರನಹಳ್ಳಿ ಹೋಬಳಿಗೆ ಸೇರುವ ದೊಡ್ಡ ಹರವೆ ಗ್ರಾಮದ 2ನೇ ಬ್ಲಾಕ್‌ನ ಊರುಗುಪ್ಪೆಯಲ್ಲಿಯ ಸರ್ಕಾರಿ ಶಾಲೆಯ

ಮುಂಭಾಗದ ರಸ್ತೆಯಲ್ಲಿ ಕೆಎ–12/ಎ–0051 ನೋಂದಣಿ ಸಂಖ್ಯೆಯ ಆಟೋ ವಾಹನದಲ್ಲಿ ಅಕ್ರಮವಾಗಿ 25.920 ಲೀ. ಮದ್ಯವನ್ನು ಹೊಂದಿ, ಸಾಗಾಣಿಕೆ ಮಾಡುತ್ತಿದ್ದುದು ಕಂಡುಬಂದಿರುತ್ತದೆ. ಈ ಸಂದರ್ಭದಲ್ಲಿ ಆರೋಪಿ ಅಜ್ಗರ್ ಪಾಷಾ ಬಿನ್ ಮಹಮದ್ ಮುಸ್ತಾಫ್ ಇವರನ್ನು ದಸ್ತಗಿರಿಗೊಳಿಸಲಾಗಿರುತ್ತದೆ. ವಾಹನಕ್ಕೆ ಸಂಬಂಧಪಟ್ಟ ಆರೋಪಿಗಳಾಗಲೀ/ ವಾಹನ ಮಾಲೀಕರಾಗಲೀ ತಮ್ಮ ನಿಲುವು ಏನೆಂಬುದನ್ನು ಮತ್ತು ಮಾಲೀಕರ ಮೇಲೆ ಇರತಕ್ಕಂತಹ ಜವಾಬ್ದಾರಿಯನ್ನು ಇದುವರೆವಿಗೂ ಈ ಪ್ರಾಧಿಕಾರದ ಮುಂದೆ ಹಾಜರಾಗಿ ಸ್ಪಷ್ಟವಾಗಿ ನಿರೂಪಿಸಿರುವುದಿಲ್ಲ. ಹಾಗೂ ವಾಹನ ಬಿಡುಗಡೆಗಾಗಿ ಪ್ರತಿವಾದಿಗಳ ಕಡೆಯಿಂದ ಯಾವುದೇ ಪ್ರಯತ್ನ ನಡೆದಿರುವುದಿಲ್ಲ.

ಈ ಪ್ರಕರಣ ದಾಖಲಾಗಿ ಈಗಾಗಲೇ ಸುಮಾರು (6) ತಿಂಗಳಿಗೂ ಹೆಚ್ಚು ಕಾಲ ಕಳೆದರೂ ಸಹ ಜಫ್ತಿಯಾದ ವಾಹನವು ತನ್ನದೆಂದಾಗಲೀ, ಈ ಬಗ್ಗೆ ತಾನು ವಿಚಾರಣೆ ನಡೆಸುತ್ತೇನೆ ಎಂದಾಗಲೀ ಯಾರೊಬ್ಬರೂ ಇಂದಿನವರೆವಿಗೂ ಖುದ್ದಾಗಿಯಾಗಲೀ, ಅಥವಾ ತನ್ನ ವಕೀಲರ ಮೂಲಕವಾಗಲೀ ಅರ್ಜಿಯನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುವುದಿಲ್ಲ. ವಾಹನ ಮಾಲೀಕರುಗಳಿಗೆ ಸಾಕಷ್ಟು ದಿನಗಳ ಕಾಲಾವಕಾಶವನ್ನು ನೀಡಿದಾಗಲೂ ಸಹ ಇವರು ಈ ಪ್ರಾಧಿಕಾರದಲ್ಲಿ ತನ್ನ ಹಕ್ಕನ್ನು ಸ್ಥಾಪಿಸದೇ ಇರುವುದರಿಂದ ಸದರಿಯವರು ತನ್ನ ಮೇಲೆ ಹೊರಿಸಿರುವ ಆರೋಪವನ್ನು ಆಪರೋಕ್ಷವಾಗಿ ಒಪ್ಪಿಕೊಂಡಂತಾಗಿದೆ. ಅಲ್ಲದೇ ಈ ಘಟನೆಯು ಸಂಭವಿಸಿದ ದಿನದಂದು ವಾಹನವು ಯಾರ ವಶದಲ್ಲಿತ್ತೋ ಅವರಿಗೆ ಅಥವಾ ವಾಹನ ಮಾಲೀಕರಿಗೆ/ ಏಜೆಂಟರ್ ಗಮನಕ್ಕೆ ಬಾರದೇ ಮತ್ತು ಅವರುಗಳು ಶಾಮೀಲಾಗದೆ ಹಾಗೂ ಅವರೆಲ್ಲರಿಗೂ ಅರಿವಿಲ್ಲದೇ ಈ ಘಟನೆ ನಡೆದಿದೆ ಎಂಬುದನ್ನು ತೃಪ್ತಿಕರವಾಗಿ ಈ ಪ್ರಾಧಿಕಾರದಲ್ಲಿ ನಿರೂಪಿಸಿಲ್ಲವಾದ್ದರಿಂದ ಸದರಿ ವಾಹನವನ್ನು ಇನ್ನೂ ಹಾಗೇ ಇಟ್ಟುಕೊಂಡಲ್ಲಿ ಯಾವುದೇ ಪ್ರಯೋಜನ ಇರದಿರುವುದನ್ನು ಮನಗಂಡು ಅದನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತವೆಂದು ಕಂಡುಬಂದಿರುತ್ತದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ: ಡಿಟಿಸಿಆರ್/120/2009–10, ದಿನಾಂಕ:15ನೇ ಏಪ್ರಿಲ್, 2010**

ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಬಿ)ರ ಪ್ರಕಾರ ಅನುಸರಿಸಬೇಕಾದ ಕ್ರಮಗಳನ್ನೆಲ್ಲಾ ಅನುಸರಿಸಿದ ನಂತರ ಕಲಂ 43(ಎ) (2) ರನ್ವಯ ನನಗೆ ದತ್ತವಾದ ಅಧಿಕಾರವನ್ನು ಚಲಾಯಿಸಿ, ಅಬಕಾರಿ ನಿರೀಕ್ಷಕರು, ಪಿರಿಯಾಪಟ್ಟಣ ವಲಯ ಇವರು ಹೂಡಲಾದ ಪ್ರ.ಮಾ.ವರದಿ ಸಂಖ್ಯೆ:02/2009–10, ದಿನಾಂಕ:03.11.2009ರಂದು ವಶಪಡಿಸಿಕೊಂಡ ಕೆಎ–12/ಎ–0051 ನೋಂದಣಿ ಸಂಖ್ಯೆಯ ಆಟೋ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶಿಸಿದೆ.

(ಈ ಆದೇಶವನ್ನು ಇಂದು ಅಂದರೆ 2010ನೇ ಇಸವಿ ಏಪ್ರಿಲ್ ತಿಂಗಳ 15ನೇ ತಾರೀಖಿನಂದು ವಿಷಯ ನಿರ್ವಾಹಕರಿಗೆ ಉಕ್ತಲೇಖನ ನೀಡಿ, ನಂತರ ಗಣಕೀಕೃತಗೊಳಿಸಿ, ತಪ್ಪುಗಳನ್ನು ತಿದ್ದಿ, ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.)

**ಡಾ॥ ವೈ. ಮಂಜುನಾಥ್,**
ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್
ಹಾಗೂ ಅಧಿಕೃತ ಅಧಿಕಾರಿಗಳು,
ಮೈಸೂರು ಜಿಲ್ಲೆ, ಮೈಸೂರು.

ಪಿ.ಆರ್.960

**ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು ಇವರ ನ್ಯಾಯಾಲಯ**

**ಸಂಖ್ಯೆ: ಡಿಟಿಸಿಆರ್:574/2008–09, ದಿನಾಂಕ:13ನೇ ಮೇ, 2010**

**ಉಪಸ್ಥಿತರು:** ಡಾ॥ ವೈ. ಮಂಜುನಾಥ್,
ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್ ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು.

| **ಫಿರ್ಯಾದುದಾರರು:** | **ವಿರುದ್ಧ** | **ಪ್ರತಿವಾದಿ/ ಆರೋಪಿ** |
|---|---|---|
| ಆರಕ್ಷಕ ನಿರೀಕ್ಷಕರು, ಸರಸ್ವತಿಪುರಂ ಪೊಲೀಸ್ ಠಾಣೆ, ಮೈಸೂರು. | | ಹೇಮಂತ್ ಬಿನ್ ಹೊನ್ನೇಗೌಡ |

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ:20.02.2009ರಂದು ಬೆಳಿಗ್ಗೆ 11.15 ಗಂಟೆ ಸಮಯದಲ್ಲಿ ಆರಕ್ಷಕ ನಿರೀಕ್ಷಕರು, ಅಬಕಾರಿ ಜಾರಿ ಮತ್ತು ಲಾಟರಿ ಮತ್ತು ನಿಷೇಧ ವಿಭಾಗ, ಮೈಸೂರು ನಗರ, ಇವರು ರಾಜಾಜಿನಗರದ ರಿಂಗ್ ರಸ್ತೆಯ ಬಳಿ ಶಾರದಾದೇವಿ ನಗರದ

ಕಡೆಯಿಂದ ಕೆಎ–09/ಇಎಂ–6430 ನೋಂದಣಿ ಸಂಖ್ಯೆಯ ಬಜಾಜ್ ಪಲ್ಸರ್ ವಾಹನದಲ್ಲಿ ಅಕ್ರಮವಾಗಿ 17.280 ಲೀ. ಮದ್ಯವನ್ನು ಹೊಂದಿ, ಸಾಗಾಣಿಕೆ ಮಾಡುತ್ತಿದ್ದ ಆರೋಪಕ್ಕಾಗಿ ವಾಹನ ಮತ್ತು ಮದ್ಯವನ್ನು ಜಪ್ತುಗೊಳಿಸಿ, ಆರೋಪಿ ಹೇಮಂತ್ ಬಿನ್ ಹೊನ್ನೇಗೌಡ ಇವರನ್ನು ದಸ್ತಗಿರಿ ಮಾಡಿ ಮುಂದಿನ ಕ್ರಮ ಜರುಗಿಸಲು ಸರಸ್ವತಿಪುರಂ ಪೊಲೀಸ್ ಠಾಣೆಯ ಠಾಣಾಧಿಕಾರಿಗಳಿಗೆ ಹಸ್ತಾಂತರಿಸಿ, ಠಾಣಾ ಮೊಕದ್ದಮೆ ಸಂಖ್ಯೆ: 15/2009ರಲ್ಲಿ ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 11, 14, 32, 34ರ ರೀತ್ಯಾ ಮೊಕದ್ದಮೆ ದಾಖಲಿಸಿ, ಜಪ್ತುಪಡಿಸಲಾದ ವಾಹನ ಮತ್ತು ಮದ್ಯವನ್ನು ಅಬಕಾರಿ ಇಲಾಖೆಗೆ ಹಸ್ತಾಂತರಿಸಲು ದಿನಾಂಕ:18.05.2009 ರಂದು ಈ ಪ್ರಾಧಿಕಾರದ ಅನುಮತಿಗಾಗಿ ಕೋರಿರುತ್ತಾರೆ. ಅಂತೆಯೇ ದಿನಾಂಕ:22.05.2009ರಂದು ಮೈಸೂರು ವಲಯ–3ರ ಅಬಕಾರಿ ನಿರೀಕ್ಷಕರಿಗೆ ಹಸ್ತಾಂತರಿಸಲು ಅನುಮತಿ ನೀಡಲಾಗಿರುತ್ತದೆ.

ಕೆ. ನಾಗರಾಜು ಬಿನ್ ಕೆಂಚೇಗೌಡ ಕೆ. ಸಾಲುಂಡಿ ಗ್ರಾಮ ಮತ್ತು ಹೋಬಳಿ, ಎಂ.ಕೆ. ಹಳ್ಳಿ ಅಂಚೆ, ಮೈಸೂರು ಇವರ ಪರ ವಕೀಲರು ವಕಾಲತ್ತಿನೊಂದಿಗೆ ಅರ್ಜಿಯನ್ನು ಸಲ್ಲಿಸಿ ವಾಹನವನ್ನು ತನ್ನ ಮಧ್ಯಕಾಲಿನ ಸುಪರ್ದಿಗೆ ನೀಡಬೇಕೆಂದು ಕೋರಿರುತ್ತಾರೆ. ಸದರಿ ವಾಹನ ಮಾಲೀಕರಿಗೆ ಈ ಪ್ರಾಧಿಕಾರದಿಂದ ಕಲಂ 43(ಬಿ)ರಡಿಯಲ್ಲಿ ಕಾರಣ ಕೇಳುವ ನೋಟಿಸ್‌ನ್ನು ನೀಡಲಾಗಿದ್ದು, ಕಾರಣ ಕೇಳುವ ನೋಟಿಸಿಗೆ ಪ್ರತಿಕ್ರಿಯಿಸಿ ಲಿಖಿತ ಮೂಲಕ ಉತ್ತರವನ್ನು ಸಲ್ಲಿಸಿ, ಆರೋಪವನ್ನು ಅಲ್ಲಗಳೆದಿರುತ್ತಾರೆ.

ವಶಪಡಿಸಿಕೊಂಡ ವಾಹನದ ಮಾಲೀಕತ್ವದ ವಿವರವುಳ್ಳ 'ಬಿ' ವಹಿಯ ಪ್ರತಿಯನ್ನು ಕೋರಿ, ಮೈಸೂರು ಪೂರ್ವ ಜಿಲ್ಲೆಯ ಪ್ರಾದೇಶಿಕ ಸಾರಿಗೆ ಅಧಿಕಾರಿಗಳಿಗೆ ದಿನಾಂಕ:23.05.2009ರಂದು ಈ ಪ್ರಾಧಿಕಾರದಿಂದ ಪತ್ರ ಬರೆಯಲಾಗಿರುತ್ತದೆ. ಆದರೆ ಇಲ್ಲಿಯವರೆಗೆ ಯಾವುದೇ ಪ್ರತಿಕ್ರಿಯೆ ಬಂದಿರುವುದಿಲ್ಲ.

ಲಭ್ಯವಿರುವ ದಾಖಲಾತಿಗಳನ್ನು ಪರಿಶೀಲಿಸಲಾಯಿತು. ದಿನಾಂಕ:20.02.2009ರಂದು ಮೈಸೂರು ನಗರದ ರಾಜಾಜಿನಗರದ ರಿಂಗ್ ರಸ್ತೆಯ ಬಳಿ ಶಾರದಾದೇವಿ ನಗರದ ಕಡೆಯಿಂದ ಕೆಎ–09/ಇಎಂ–6430 ನೋಂದಣಿ ಸಂಖ್ಯೆಯ ಬಜಾಜ್‌ಪಲ್ಸರ್ ವಾಹನದಲ್ಲಿ ಅಕ್ರಮವಾಗಿ 17.280 ಲೀ. ಮದ್ಯವನ್ನು ಹೊಂದಿ, ಸಾಗಾಣಿಕೆ ಮಾಡುತ್ತಿದ್ದುದು ಕಂಡುಬಂದಿರುತ್ತದೆ. ಈ ಪ್ರಕರಣದಲ್ಲಿ ಹೇಮಂತ್ ಬಿನ್ ಹೊನ್ನೇಗೌಡ ಎಂಬ ಆರೋಪಿಯನ್ನು ದಸ್ತಗಿರಿ ಮಾಡಲಾಗಿರುತ್ತದೆ. ಅರ್ಜಿದಾರರು ತಮ್ಮ ಅರ್ಜಿಯಲ್ಲಿ ಸದರಿ ವಾಹನವನ್ನು ತಮ್ಮ ಮಧ್ಯಕಾಲಿನ ಸುಪರ್ಧಿಗೆ ಬಿಡುಗಡೆ ಮಾಡಿಕೊಡಬೇಕೆಂದು ಕೋರಿ ಅರ್ಜಿ ಸಲ್ಲಿಸಿದ್ದು, ವಾಹನವನ್ನು ಬಿಡುಗಡೆ ಮಾಡಿದಲ್ಲಿ ಅರ್ಜಿದಾರರು ಮಾರಾಟ ಮಾಡುವ ಅಡಮಾನ ಮಾಡುವ, ಬಣ್ಣ ಬದಲಾಯಿಸುವ, ಬಿಡಿಭಾಗಗಳನ್ನು ಬದಲಾಯಿಸುವ ಸಾಧ್ಯತೆಗಳಿದ್ದು, ಅಲ್ಲದೆ ಇಂತಹುದೇ ಕೃತ್ಯಕ್ಕೆ ಬಳಸುವ ಸಾಧ್ಯತೆಗಳಿರುವುದರಿಂದ ಹಾಗೂ ಕಲಂ 43(ಬಿ)(2)ರಡಿಯಲ್ಲಿ ಕಾನೂನಿನಲ್ಲಿ ವಿವಿಧ ಜವಾಬ್ದಾರಿಗಳಿದ್ದು ಅದನ್ನು ನಿರ್ವಹಿಸುವ ಆದ್ಯ ಕರ್ತವ್ಯ/ ಜವಾಬ್ದಾರಿ ಅರ್ಜಿದಾರರ ಮೇಲಿದ್ದು ಈ ಕಾರಣದಿಂದಾಗಿ ಆತ ನೇರವಾಗಿ ಈ ಪ್ರಕರಣದಲ್ಲಿ ಭಾಗಿಯಾಗಿಲ್ಲದಿದ್ದರೂ ಕೂಡ ಪರೋಕ್ಷವಾಗಿ ಆತನೇ ಹೊಣೆಗಾರನಾಗಿರುತ್ತಾನೆ.

ಈ ಪ್ರಕರಣ ದಾಖಲಾಗಿ ಈಗಾಗಲೇ ಸುಮಾರು (13) ತಿಂಗಳಿಗೂ ಹೆಚ್ಚು ಕಾಲ ಕಳೆದಿದ್ದು, ಅರ್ಜಿದಾರರು ವಾಹನ ಮಧ್ಯಂತರ ಬಿಡುಗಡೆಗೆ ಅರ್ಜಿಯನ್ನು ಸಲ್ಲಿಸಿರುವುದನ್ನು ಹೊರತುಪಡಿಸಿ, ವಾಹನ ಬಿಡುಗಡೆಗಾಗಿ ಪ್ರತಿವಾದಿಗಳ ಕಡೆಯಿಂದ ಯಾವುದೇ ಪ್ರಯತ್ನ ನಡೆದಿರುವುದಿಲ್ಲ. ಸದರಿಯವರು ತನ್ನ ಮೇಲೆ ಹೊರಿಸಿರುವ ಆರೋಪವನ್ನು ಪರೋಕ್ಷವಾಗಿ ಒಪ್ಪಿಕೊಂಡಂತಾಗಿದೆ. ಅಲ್ಲದೇ ಈ ಘಟನೆಯು ಸಂಭವಿಸಿದ ದಿನದಂದು ವಾಹನವು ಯಾರ ವಶದಲ್ಲಿತ್ತೋ ಅವರಿಗೆ ಅಥವಾ ವಾಹನ ಮಾಲೀಕರಿಗೆ/ ಏಜೆಂಟರ್ ಗಮನಕ್ಕೆ ಬಾರದೇ ಮತ್ತು ಅವರುಗಳು ಶಾಮೀಲಾಗದೆ ಹಾಗೂ ಅವರೆಲ್ಲರಿಗೂ ಅರಿವಿಲ್ಲದೇ ಈ ಘಟನೆ ನಡೆದಿದೆ ಎಂಬುದನ್ನು ತೃಪ್ತಿಕರವಾಗಿ ಈ ಪ್ರಾಧಿಕಾರದಲ್ಲಿ ನಿರೂಪಿಸಿಲ್ಲವಾದ್ದರಿಂದ ಸದರಿ ವಾಹನವನ್ನು ಇನ್ನೂ ಹಾಗೇ ಇಟ್ಟುಕೊಂಡಲ್ಲಿ ಯಾವುದೇ ಪ್ರಯೋಜನ ಇರದಿರುವುದನ್ನು ಮನಗಂಡು ಅದನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತವೆಂದು ಕಂಡುಬಂದಿರುತ್ತದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ: ಡಿಟಿಸಿಆರ್/574/2008–09, ದಿನಾಂಕ:13ನೇ ಮೇ, 2010**

ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಬಿ)ರ ಪ್ರಕಾರ ಅನುಸರಿಸಬೇಕಾದ ಕ್ರಮಗಳನ್ನೆಲ್ಲಾ ಅನುಸರಿಸಿದ ನಂತರ ಕಲಂ 43(ಎ) (2) ರನ್ವಯ ನನಗೆ ದತ್ತವಾದ ಅಧಿಕಾರವನ್ನು ಚಲಾಯಿಸಿ, ಆರಕ್ಷಕ ಉಪ ನಿರೀಕ್ಷಕರು, ಸರಸ್ವತಿಪುರಂ ಪೊಲೀಸ್ ಠಾಣೆ, ಮೈಸೂರು ನಗರ, ಇವರು ಹೂಡಲಾದ ಪ್ರ.ಮಾ.ವರದಿ ಸಂಖ್ಯೆ:15/2009, ದಿನಾಂಕ:20.02.2009ರಂದು ವಶಪಡಿಸಿಕೊಂಡ ಕೆಎ–09/ಇಎಂ6430 ನೋಂದಣಿ ಸಂಖ್ಯೆಯ ಬಜಾಜ್ ಪಲ್ಸರ್ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶಿಸಿದೆ.

(ಈ ಆದೇಶವನ್ನು ಇಂದು ಅಂದರೆ 2010ನೇ ಇಸವಿ ಮೇ ತಿಂಗಳ 13ನೇ ತಾರೀಖಿನಂದು ವಿಷಯ ನಿರ್ವಾಹಕರಿಗೆ ಉಕ್ತಲೇಖನ ನೀಡಿ, ನಂತರ ಗಣಕೀಕೃತಗೊಳಿಸಿ, ತಪ್ಪುಗಳನ್ನು ತಿದ್ದಿ, ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.)

**ಡಾ॥ ವೈ. ಮಂಜುನಾಥ್,**
ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್
ಹಾಗೂ ಅಧಿಕೃತ ಅಧಿಕಾರಿಗಳು,
ಮೈಸೂರು ಜಿಲ್ಲೆ, ಮೈಸೂರು.

ಪಿ.ಆರ್.968

**ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು ಇವರ ನ್ಯಾಯಾಲಯ**

**ಸಂಖ್ಯೆ: ಡಿಟಿಸಿಆರ್:437/2008–09, ದಿನಾಂಕ:18ನೇ ಮಾರ್ಚ್, 2010**

**ಉಪಸ್ಥಿತರು:** ಡಾ॥ ವೈ. ಮಂಜುನಾಥ್,
ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್ ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು.

| **ಫಿರ್ಯಾದುದಾರರು:** | **ವಿರುದ್ಧ** | **ಪ್ರತಿವಾದಿ/ ಆರೋಪಿ** |
|---|---|---|
| ಆರಕ್ಷಕ ನಿರೀಕ್ಷಕರು, ಮಂಡಿ ಪೊಲೀಸ್ ಠಾಣೆ, ಮೈಸೂರು. | | ನಾಗರಾಜ ಬಿನ್ ಲೇ: ಲಿಂಗಪ್ಪ |

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ:13.02.2009ರಂದು ಮಧ್ಯಾಹ್ನ 2.00 ಗಂಟೆ ಸಮಯದಲ್ಲಿ ಆರಕ್ಷಕ ನಿರೀಕ್ಷಕರು, ಅಬಕಾರಿ ಜಾರಿ ಮತ್ತು ಲಾಟರಿ ಮತ್ತು ನಿಷೇಧ ವಿಭಾಗ, ಮೈಸೂರು ನಗರ, ಇವರು ಮೈಸೂರು ನಗರದ ಅಕ್ಬರ್ ರಸ್ತೆಯ ಮಂಡಿ ಮಾರ್ಕೆಟ್ ಬಳಿ ಕೆಎ–09/ಎಲ್–129 ನೋಂದಣಿ ಸಂಖ್ಯೆಯ ಟಿವಿಎಸ್–50 ವಾಹನದಲ್ಲಿ ಅಕ್ರಮವಾಗಿ 19.440 ಲೀ. ಮದ್ಯ 3.300 ಲೀ. ಬಿಯರನ್ನು ಹೊಂದಿ, ಸಾಗಾಣಿಕೆ ಮಾಡುತ್ತಿದ್ದ ಆರೋಪಕ್ಕಾಗಿ ವಾಹನ ಮತ್ತು ಮದ್ಯವನ್ನು ಜಪ್ತುಗೊಳಿಸಿ ಆರೋಪಿಯಾದ ನಾಗರಾಜ ಬಿನ್ ಲೇ: ಲಿಂಗಪ್ಪ ಎಂಬುವವನನ್ನು ದಸ್ತಗಿರಿ ಮಾಡಿ ಮುಂದಿನ ಕ್ರಮ ಜರುಗಿಸಲು ಮಂಡಿ ಪೊಲೀಸ್ ಠಾಣೆಗೆ ಹಸ್ತಾಂತರಿಸಿ ಠಾಣಾ ಮೊಕದ್ದಮೆ ಸಂಖ್ಯೆ:25/2009ರಲ್ಲಿ ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 11, 14, 32, 34ರ ರೀತ್ಯಾ ಮೊಕದ್ದಮೆ ದಾಖಲಿಸಿ, ಜಪ್ತುಪಡಿಸಲಾದ ವಾಹನ ಮತ್ತು ಮದ್ಯವನ್ನು ಅಬಕಾರಿ ಇಲಾಖೆಗೆ ಹಸ್ತಾಂತರಿಸಲು ದಿನಾಂಕ:21.02.2009 ರಂದು ಈ ಪ್ರಾಧಿಕಾರದ ಅನುಮತಿಗಾಗಿ ಕೋರಿರುತ್ತಾರೆ. ಅಂತೆಯೇ ದಿನಾಂಕ:27.02.2009ರಂದು ಮೈಸೂರು ವಲಯ–1ರ ಅಬಕಾರಿ ನಿರೀಕ್ಷಕರಿಗೆ ಹಸ್ತಾಂತರಿಸಲು ಅನುಮತಿ ನೀಡಲಾಗಿರುತ್ತದೆ.

ವಶಪಡಿಸಿಕೊಂಡ ವಾಹನದ ಮಾಲೀಕತ್ವದ ವಿವರವುಳ್ಳ 'ಬಿ' ವಹಿಯ ಪ್ರತಿಯನ್ನು ಕೋರಿ, ಮೈಸೂರು ಜಿಲ್ಲೆಯ ಪೂರ್ವ ಪ್ರಾದೇಶಿಕ ಸಾರಿಗೆ ಅಧಿಕಾರಿಗಳಿಗೆ ದಿನಾಂಕ:16.03.2009ರಂದು ಈ ಪ್ರಾಧಿಕಾರದಿಂದ ಪತ್ರ ಬರೆಯಲಾಗಿರುತ್ತದೆ. ಇದೂವರೆವಿಗೂ ಯಾವುದೇ ಪ್ರತಿಕ್ರಿಯೆ ಇರುವುದಿಲ್ಲ.

ವಾಹನದ ಮಾಲೀಕರಾದ ಜಿ.ಚಂದ್ರ ಬಿನ್ ಕೆ.ಸಿ. ಗೋಪಾಲ್, ಕೆ.ಕೆ. ಹುಂಡಿ, ರಾಮನಹಳ್ಳಿ ಪೋಸ್ಟ್, ಮೈಸೂರು ತಾ: ಇವರು ತಮ್ಮ ವಕೀಲ ಮುಖೇನ ದಿನಾಂಕ:03.03.2009ರಂದು ವಕಾಲತ್ತಿನೊಂದಿಗೆ ಅರ್ಜಿ ಸಲ್ಲಿಸಿ ಜಪ್ತುಪಡಿಸಲಾದ ಟಿವಿಎಸ್–50 ಸಂಖ್ಯೆ:ಕೆಎ–09/ಎಲ್–129 ವಾಹನಕ್ಕೆ ಅಗತ್ಯ ಭದ್ರತೆಯನ್ನು ಪಡೆದು ತಮ್ಮ ಮಧ್ಯಂತರ ಸುಪರ್ದಿಗೆ ಬಿಡುಗಡೆ ಮಾಡಬೇಕೆಂದು ಕೋರಿರುತ್ತಾರೆ.

ಲಭ್ಯವಿರುವ ದಾಖಲಾತಿಗಳನ್ನು ಪರಿಶೀಲಿಸಲಾಯಿತು. ದಿನಾಂಕ:13.02.2009ರಂದು ಮೈಸೂರು ನಗರದ ಅಕ್ಬರ್ ರಸ್ತೆಯ ಮಂಡಿ ಮಾರ್ಕೆಟ್ ಬಳಿ ಕೆಎ–09/ಎಲ್–129 ನೋಂದಣಿ ಸಂಖ್ಯೆಯ ಟಿವಿಎಸ್–50 ವಾಹನದಲ್ಲಿ ಅಕ್ರಮವಾಗಿ 19.440 ಲೀ. ಮದ್ಯ 3.300 ಲೀ. ಬಿಯರನ್ನು ಹೊಂದಿ, ಸಾಗಾಣಿಕೆ ಮಾಡುತ್ತಿದ್ದುದು ಕಂಡುಬಂದಿರುತ್ತದೆ. ಈ ಪ್ರಕರಣದಲ್ಲಿ ನಾಗರಾಜ ಬಿನ್ ಲೇ: ಲಿಂಗಪ್ಪ ಎಂಬ ಆರೋಪಿಯನ್ನು ದಸ್ತಗಿರಿ ಮಾಡಲಾಗಿರುತ್ತದೆ. ಈ ಬಗ್ಗೆ ಪ್ರತಿವಾದಿಗಳಾಗಲಿ ಅವರ ವಕೀಲರಾಗಲಿ ವಾಹನ ಮಾಲೀಕರ ತಿಳುವಳಿಕೆಯಲ್ಲಿ ಈ ಕೃತ್ಯ ನಡೆದಿರುವುದಿಲ್ಲ ಎಂಬುದರ ಬಗ್ಗೆ ತನ್ನ ಮೇಲೆ ಇರತಕ್ಕಂತಹ ಜವಾಬ್ದಾರಿಯನ್ನು ಇದೂವರೆಗೂ ಈ ಪ್ರಾಧಿಕಾರದ ಮುಂದೆ ಹಾಜರಾಗಿ ತನ್ನ ನಿಲುವು ಏನೆಂಬುದನ್ನು ಸ್ಪಷ್ಟವಾಗಿ ನಿರೂಪಿಸಿರುವುದಿಲ್ಲ.

ಈ ಪ್ರಕರಣ ದಾಖಲಾಗಿ ಈಗಾಗಲೇ ಸುಮಾರು 11 ತಿಂಗಳಿಗೂ ಹೆಚ್ಚು ಕಾಲ ಕಳೆದಿರುತ್ತದೆ. ಜಪ್ತಿಯಾದ ವಾಹನವನ್ನು ಮಧ್ಯಂತರ ಬಿಡುಗಡೆಗಾಗಿ ವಕೀಲ ಮುಖೇನ ಅರ್ಜಿಯನ್ನು ಸಲ್ಲಿಸಲಾಗಿದ್ದು, ವಾಹನ ಬಿಡುಗಡೆಗಾಗಿ

